# ಎರಡನೇ ಹೆಂಡತಿ.



ಲೇಖಕ:—

ಭಿ. ಪ. ಕಾಳೆ.



ಪ್ರಕಾಶಕ:—

ವಾಯ್. ಜಿ. ಕುಲಕರ್ಣಿ,
ಸಂಪಾದಕ, ಸ. ಚ. ಆನಂದವನ.



೧೯೨೮



ಬೆಲೆ ೮ ಆಣೆ

# ಎರಡನೇ ಹೆಂಡತಿ.

(ಒಂದು ಸಮಾಜ ಚಿತ್ರವು.)





## ಮೊದಲನೇ ಓರೆನೋಟ.



ಇದರಲ್ಲೇನೂ ವಿಶೇಷವಿಲ್ಲ; ಎರಡನೇ ಹೆಂಡತಿಯಿಂದ ಬಳಿಕ ಆಕೆಯ ಮುರಕವು ಹೆಚ್ಚಿನದೇ. ಯಾವ ಗಂಡನು ತನ್ನ ಮೊದಲನೇ ಹೆಂಡತಿಯ ಕಾಲಕ್ಕೆ ಒಳ್ಳೇ ಶೂರನೂ ಧೀರನೂ ಆಗಿರುವನೋ, ಆತನೇ ಎರಡನೇ ಹೆಂಡತಿಯ ದಾಸಾನುದಾಸನಾಗುವನು! ಅಂತೇ "ದ್ವಿತೀಯ ಭಾರ್ಯಾ ಪ್ರಾಣಾತ್ ಗರೀಯಸಿ" ಎಂದು ಸುಭಾಷಿತಕಾರನು ಅಂದಿದ್ದಾನೆ. ಹೀಗಾಗಲಿಕ್ಕೆ ಕಾರಣವೇನಿರಬಹುದು? ಎಂಥ ಕಟ್ಟುನಿಟ್ಟಿನ ಸ್ವಭಾವದವನಿದ್ದರೂ ಅವನು ತನ್ನ ಎರಡನೇ ಹೆಂಡತಿಯ ಎದುರಿಗೆ ಹೀಗೆ ಬೆಣ್ಣೆಯಂತೆ ಮೆತ್ತಗಾಗುವ ಕಾರಣವೇನು? ಆದರೆ ಅದರ ಮರ್ಮವು ನಮಗೆ ಹೇಗೆ ಗೊತ್ತಾಗಬೇಕು? ಎರಡನೇ ಹೆಂಡತಿಯ ಗಂಡಂದಿರಾದವರನ್ನು ಕೇಳಿದರೇ ಯೋಗ್ಯ ಉತ್ತರವು ದೊರಕಬಹುದು.

ನರಸಿಂಹಗೌಡನು ಎರಡನೇ ಸಂಬಂಧ ಮಾಡಿಕೊಂಡಾಗ್ಗೆ ಅವನ ವಯಸ್ಸು ೫೦ರ ಒಳಹೊರಗಿರಬಹುದು. ಆದರೆ ಗಡ್ಡ-ಮೀಸೆಗಳಿಗೆ ಕಲಪನ್ನು ಸವರಿಕೊಂಡು, ತಲೆಗೆ ಕಾಮಿನಿಯಾ ಎಣ್ಣೆಯ ಎಷ್ಟೋ ಸೀಸೆಗಳನ್ನು ಸುರುವಿಕೊಂಡು ಆತನು ತನ್ನ ವಯಸ್ಸನ್ನು ೩೦ರ ಮನೆಗೆ ತಂದು ನಿಲ್ಲಿಸಿದ್ದನು. ಆತನ ಕೆಲ ಹಿತಚಿಂತಕರಂತೂ ಆತನಿಗಿನ್ನೂ ೩೦ ಕೂಡ ಆಗಿಲ್ಲವೆಂದೇ ಪ್ರತಿಪಾದಿಸುತ್ತಿದ್ದರು. ಮನುಷ್ಯನ ಆಯುಷ್ಯವೆಂಬ ಗಡಿಯಾರದ ಮುಳ್ಳನ್ನು ಹಿಂದೂಡಲಿಕ್ಕೆ ಈಗ ಪ್ರಚಾರದಲ್ಲಿ ಬಂದಿರುವ ಹೊಸ ಹೊಸ ಕಲಪುಗಳೂ, ನಾನಾ ಹೆಸರಿನ ತೈಲಗಳೂ, ಚಿನ್ನ-ಬೆಳ್ಳಿಯ ಹಲ್ಲುಗಳೂ ಸಾಧನೀಭೂತಗಳಾಗಿರುವಂತೆ; ಪ್ರಸ್ತುತದ ಮನ್ವಂತರದಲ್ಲಿ ಭರದಿಂದ

ಮುಂದೆ ಬರುತ್ತಲಿರುವ ವಿವಾಹಗಳನ್ನು ಕೂಡಿಸಿಕೊಡುವ ಸ್ತ್ರೀಪುರುಷ ದಲ್ಲಾಲರೂ ಮಹತ್ವದ ಚಾಲಕರಾಗಿರುತ್ತಾರೆ. ಇವರಿಂದ ಎಷ್ಟೋ ಜನರು ಮೋಸಹೋಗಿ, ತೀರ ಜರಠನನ್ನು ಕೂಡ ತರುಣನೆಂದು ತಿಳಿಯು ತ್ತಾರೆ. ನಮ್ಮ ಸರಸಕ್ಕನ ತಂದೆಯಾದರೂ ಹೀಗೆಯೇ ಮಬ್ಬಿಗೆ ಬಿದ್ದಿ ದ್ದನು. ಬುಜ್ಜಪ್ಪನೇನು ಹೇಳಿಕೇಳಿ ಶಿವಭಕ್ತನು. ಶಿವನ ಧ್ಯಾನದ ಹೊರತು ಬಾಹ್ಯಸೃಷ್ಟಿಯ ಅರಿವೇ ಆತನಿಗಿರುತ್ತಿದ್ದಿಲ್ಲ. ಆತನು ಬಹುಶಃ ಮನೆಬಿಟ್ಟು ಹೊರಗೆ ಹೋಗುತ್ತಲೇ ಇರಲಿಲ್ಲ. ಹೋದರೂ ಶಿವಭ ಕ್ತರಲ್ಲಿಯ ಧೂಮ್ರಪಾನವನ್ನುಳಿದು ಇತರ ವಿಷಯದ ಗೋಜಿಗೆ ಹೋಗು ತ್ತಿದ್ದಿಲ್ಲ. ಅದರಿಂದ ಬುಜ್ಜಪ್ಪನವರಿಗೆ ನರಸಿಂಹಗೌಡನ ವಯಸ್ಸಿನ ವಿಷಯವಾಗಿ ಅವನ ದಲ್ಲಾಲರು ಹೇಳಿದ ಸಂಗತಿಯು ನಿಜವೆಂದು ತೋ ರಿತು; ಮತ್ತು ಅದಕ್ಕಾಗಿಯೇ ಅವರು ತಮ್ಮ ಪ್ರೀತಿಯ ಒಬ್ಬಳೇ ಒಬ್ಬ ಮಗಳಾಗಿದ್ದ ಸರಸಕ್ಕನನ್ನು ಆ ನರಸನಗೌಡನಿಗೆ ಧಾರೆಯೆರೆದು ಕೊಟ್ಟಿದ್ದರು.

ವಿವಾಹ ಮಹೋತ್ಸವವು ನುಗ್ಗಿಕೇರಿಯ ಬಲಭೀಮನ ಸನ್ನಿಧಿ ಯಲ್ಲಿ ಒಂದು ಇತ್ತು-ಒಂದು ಇಲ್ಲ, ಈ ಪದ್ಧತಿಯ ಅವಸರದಿಂದ ಒಂದೇ ದಿನದಲ್ಲಿ ಸಾಂಗವಾಗಿ ಹೋಯಿತು. ಮುಂಬಯಿಯಲ್ಲೇ ಲಗ್ನಕಾರ್ಯ ವಾಗಬೇಕೆಂದು ನರಸನಗೌಡನ ಮನೀಷೆಯಿತ್ತು; ಆದರೆ ಬುಜ್ಜಪ್ಪನ ವರು ನುಗ್ಗಿಕೇರಿಯ ಬಳಿಯ ತಮ್ಮ ಗ್ರಾಮವನ್ನು ಬಿಟ್ಟು ಬರಲಿಕ್ಕೆ ಒಪ್ಪಿದರೆ ತಾನೇ ಅದಾಗುವದು? ನರಸನಗೌಡನು ಮುಂಬಯಿಗೇ ಲಗ್ನಕ್ಕೆ ಬರಬೇಕೆಂದು ತನ್ನ ಮಾವನಿಗೆ ಕೇಳಲು, ಅವನು—"ನಾನು ಮಾಡಿದರೆ ನನ್ನ ಮಗಳ ಲಗ್ನವನ್ನು ನಮ್ಮ ಊರಲ್ಲಿ ನನ್ನ ಮನೆಯ ಮುಂದೇ ಮಾಡು ವೆನು; ಅದು ಸಾಧಿಸದಿದ್ದರೆ ನಮ್ಮ ನುಗ್ಗಿಕೇರಿಯ ಹನುಮಪ್ಪನ ಗುಡಿ ಯಲ್ಲಿ. ಇವುಗಳ ಹೊರತು ಮೂರನೆಯ ಸ್ಥಳಕ್ಕೆ ಕಾಲತ್ರಯದಲ್ಲೂ ನಾನು ಬರತಕ್ಕವನಲ್ಲ," ಎಂದು ಸ್ಪಷ್ಟವಾಗಿ ತಿಳಿಸಿದ್ದರಿಂದ ಗೌಡನು ನಿರುಪಾಯನಾಗಿ ತನ್ನ ನಾಲ್ಕು ಜನ ಸ್ನೇಹಿತರೊಡನೆ ಮುಂಬಯಿಯಿಂದ ನುಗ್ಗಿಕೇರಿಗೆ ಬಂದನು.

ಬುಜ್ಜಪ್ಪನವರು ಮನೆಯಿಂದ ಕೇವಲ ಶ್ರೀಮಂತರಾಗಿದ್ದಿಲ್ಲವಾದರೂ ಉಂಡುಟ್ಟು ಸುಖದಿಂದಿರುವ ಮಧ್ಯಮವಿತ್ತದವರಾಗಿದ್ದರು. ಅವರಿಗೆ

ಈಗ ಸರಾಸರಿ ಮೂವತ್ತು ವರ್ಷಗಳಾಗಿದ್ದವು. ಈಗ ಹದಿನೈದು ವರ್ಷಗಳ ಹಿಂದೆ ಸರಸ್ವತಿಯು ಹುಟ್ಟಿದ ದಿನವೇ ಅವರ ಅರ್ಧಾಂಗಿಯು ಅವರನ್ನೂ ಆ ಕೋಮಲ ಬಾಲಿಕೆಯನ್ನೂ ತೊರೆದು, ಪರಂಧಾಮವನ್ನೈದಿದ್ದಳು. ಬುಜ್ಜಪ್ಪನವರಿಗೆ ಸಮೀಪದ ಆಪ್ತೇಷ್ಟರಾರೂ ಇರಲಿಲ್ಲ; ಆದರೆ ಅವರ ಹುಟ್ಟುಸ್ವಭಾವವೇ ಜನವಶೀಕರಣವುಳ್ಳದ್ದಾದ್ದರಿಂದ ಅವರಿಗೆ ಜನರ ಕೊರತೆಯು ಎಂದೂ ಉಂಟಾಗುತ್ತಿರಲಿಲ್ಲ. ಕುಟುಂಬವು ಗತಿಸಲು, ಅಲ್ಪ ವಯಸ್ಸಿನ ಆ ಸರಸ್ವತೀ ಬಾಲಿಕೆಯನ್ನು ನೆರೆಹೊರೆಯ ವನಿತೆಯರೇ ಪಾಲಿಸಿ, ಪೋಷಿಸಿ, ದೊಡ್ಡವಳನ್ನಾಗೆಮಾಡಿದರು. ಸರಸ್ವತಿಯು ಚತುರ ಬಾಲಿಕೆಯು. ಕೋಮಲ ಸ್ವಭಾವದವಳು. ಒಳ್ಳೇ ಚೆಲುವೆಯು. ಅದರಿಂದ ಬಾಲ್ಯದಿಂದಲೂ ನೋಡಿದವರೆಲ್ಲ ಅವಳನ್ನು ಮುದ್ದಿಸಿ, ಅವಳೊಡನೆ ಅರಗೆಳಿಗೆಯನ್ನಾದರೂ ವಿನೋದವಾಡದೆ ಹೋಗುತ್ತಿರಲಿಲ್ಲ.

ಸರಸಕ್ಕನು ಬರಬರುತ್ತ ದೊಡ್ಡವಳಾದಳು. ಮನೆಯಲ್ಲಿ ಅಕ್ಕರದ ಹಿರಿಯ ಹೆಣ್ಣುಮಕ್ಕಳಿರದಿದ್ದರೆ, ಆ ಮನೆಯ ಬಾಲ-ಬಾಲಿಕೆಯರು ಯಾವ ಪ್ರಕಾರದ ಉಲುಕೋಚಿ ಸ್ವಭಾವದವರಾಗುವರೋ ಅದೇ ಪ್ರಕಾರ ನಮ್ಮ ಸರಸಕ್ಕನ ಸ್ವಭಾವವೂ ಆಯಿತು. ಬುಜ್ಜಪ್ಪನವರು ತಮ್ಮ ಸ್ವಭಾವ ಧರ್ಮದಂತೆ ಮಗಳ ಯಾವ ಉಸಾಬರಿಗೂ ಹೋಗುತ್ತಿರಲಿಲ್ಲ. ಅದರಿಂದ ಆಕೆಗೆ ಹಿರಿಯರ ಹೆದರಿಕೆ-ಬೆದರಿಕೆಗಳ ಅನುಭವವು ಗೊತ್ತೇಆಗಲಿಲ್ಲ. ನೆರೆಹೊರೆಯವರಾರಾದರೂ ಹಿತವಚನಗಳನ್ನು ಹೇಳಹತ್ತಿದರೆ, ಅವಳಿಗೆ ಅದರ ಸ್ವಾರಸ್ಯವು ತಿಳಿಯುತ್ತಿರಲಿಲ್ಲ. ಅದರಿಂದ ಅವಳು ಪ್ರಸಂಗೋಪಾತ್ ಸಿಟ್ಟಿಗೇಳುತ್ತಿದ್ದಳು. ದಿನಕ್ರಮಿಸಿದಂತೆ ಅವಳಲ್ಲಿ ದುರಭಿಮಾನವು ಮಾತ್ರ ಹೆಚ್ಚಹತ್ತಿತು. ಆಕೆಗೆ ಅವಳಂತಹ ಸ್ವಭಾವದ ಗೆಳತಿಯರೇ ಕೂಡಿದ್ದರಿಂದ ಅವಳು ಹದಿನೈದು ವರ್ಷದವಳಾಗಿ ಲಗ್ನದ ವಧುವಾದರೂ ಅವಳ ಸ್ವಭಾವವು ಕೊಂಚವೂ ಸುಧಾರಿಸಲಿಲ್ಲ.

ಆದರೆ ದ್ವಿತೀಯ ವಿವಾಹಕ್ಕೆ ಸನ್ನದ್ಧರಾದವರು ತೀರ ಉತಾವಳಿ ಸ್ವಭಾವದವರಾಗಿರುತ್ತಿರುವದರಿಂದ, ತಮ್ಮ ಭಾವೀಪತ್ನಿಯ ಕುಲ-ಶೀಲಗಳ ಕಡೆಗೆ, ಗುಣ-ದೋಷಗಳ ಕಡೆಗೆ ಲಕ್ಷ್ಯಕೊಡಲಿಕ್ಕೆ ಅವರಿಗೆ ಅವಕಾಶವೇ ಇರುವದಿಲ್ಲ. ಪ್ರಥಮ ವಿವಾಹದಂತೆ ಅವರ ವಧುವನ್ನು ಅವರ ಕಡೆಯ ಹಿರಿಯರಾರಾದರೂ ನೋಡಿ ನಿಶ್ಚಯಿಸಿದರೆ ಅವರಿಗೆ ಸಮಾಧಾನವಾ

ಗುವದಿಲ್ಲ. ಅದರಿಂದ ಅವರೇ ಸ್ವತಃ ವಧುವಿನ ಮನೆಗೆ ಹೋಗಿ, ಆಕೆಯನ್ನು ಕಣ್ಣಾರೆ ನೋಡಿ ನಿಶ್ಚಯಿಸುವರು; ಆದರೆ ಅವರು ಆಗ ನೋಡುವದೇನು? ಬರೇ ಅವಳ ವಯಸ್ಸು; ಸುರೂಪ. ರೂಪಕ್ಕೆ ಪಾಸಿನಮುಟ್ಟಗೆ ಅಂದರೆ ೧೦೦ಕ್ಕೆ ೨೫ರಷ್ಟು ಮಾರ್ಕಗಳು ಬಿದ್ದರೂ ಸಾಕು; ವಯಸ್ಸಿನ ಬಗ್ಗೆ ಮಾತ್ರ ೧೦೦ಕ್ಕೆ ೧೨೫ರಷ್ಟು ಮಾರ್ಕುಗಳು ಬಿದ್ದರೂ ಅವರಿಗೆ ಇಷ್ಟವೇ. ಒಟ್ಟಿನಲ್ಲಿ ಅವರು ಆದಷ್ಟು ಹೆಚ್ಚು ವಯಸ್ಸಿನ ವಧುವನ್ನೇ ಆರಿಸುತ್ತಿರುವದರಿಂದ, ಆಕೆಯ ಇತರ ಗುಣಾವಗುಣಗಳ ಕಡೆಗೆ ಬೇಕೆಂತ ದುರ್ಲಕ್ಷ ಮಾಡುವರು.

ನಮ್ಮ ಸರಸಕ್ಕನು ರೂಪದಲ್ಲಿ ಸಾವಿರ ಹೆಣ್ಣುಮಕ್ಕಳಲ್ಲಿಯ ಒಬ್ಬವಳಾದ್ದರಿಂದ ದ್ವಿತೀಯ ವಿವಾಹಕ್ಕೆ ತೀರ ಆತುರರಾಗಿದ್ದ ನರಸನಗೌಡರು ಅವಳನ್ನು ನೋಡಿದಕೂಡಲೆ ಒಪ್ಪಿಕೊಂಡದ್ದರಲ್ಲೇನು ಆಶ್ಚರ್ಯ! ಅದರಂತೆ ಹುಡುಗಿಯು ಎದೆಯುದ್ದ ಬೆಳೆದ ಅದಾವ ಆಲಸ್ಯಪ್ರಿಯ ತಂದೆಗೆ ನರಸನಗೌಡನಂತಹ ಉದ್ಯೋಗಪ್ರಿಯ, ಧನ-ಕನಕಸಂಪನ್ನನಾದ ವರನು ಸೇರಲಿಕ್ಕಿಲ್ಲ? ಗೌಡರು ಕನ್ಯೆಯನ್ನು ನೋಡಿ ಹೂಂ ಅಂದದ್ದೊಂದೇ ತಡ, ಬುಜ್ಜಪ್ಪನವರ ಋಣಾನುಬಂಧಿಕರು ಬುಜ್ಜಪ್ಪನವರಿಂದಲೂ ಹೂಂ ಅನ್ನಿಸಿ, ಮುಂದಿನ ವಾರದೊಳಗೆ ಲಗ್ನದ ಶಾಸ್ತ್ರವನ್ನು ತೀರಿಸಿಬಿಟ್ಟರು. ತನ್ನ ಭಾವನೆಗೆನುಸರಿಸಿ ದೇವರೇ ತನಗೆ ಇಂಥ ಸುವರನನ್ನು ತಂದುಕೊಟ್ಟನೆಂದು ಬುಜ್ಜಪ್ಪನವರು ತಿಳಿದುಕೊಂಡರು; ತನ್ನ ಪೂರ್ವಪುಣ್ಯದಿಂದಲೇ ತನಗಿಂಥ ಪ್ರೌಢ ಹಾಗು ಸುಲಕ್ಷಣ ಹೆಂಡತಿಯು ದೊರೆತಳೆಂದು ನರಸನಗೌಡನು ತಿಳಿದನು; ಆದರೆ ಅವರ ಕಲ್ಪನೆಗಳು ಅವು ಕಲ್ಪನೆಗಳೇ ಆದುವರಿಂದ ಫಲಿಸಲಿಲ್ಲ.ಇಬ್ಬರೂ ಒಬ್ಬರಿಂದೊಬ್ಬರು ಮೋಸಹೋದಂತಾಗಿತ್ತು.

ಯಾಕಂದರೆ ನರಸನಗೌಡನು ೫೦ ವರ್ಷದವನಾಗಿದ್ದರೂ ೩೦ ವರ್ಷದವನಂತೆ ನಟಿಸಿ, ಸರಸಕ್ಕನನ್ನು ಎತ್ತಿಹಾಕಿದ್ದನು. ಸರಸಕ್ಕನಂತಹ ದುರಭಿಮಾನಿ, ಗೃಹಶಿಕ್ಷಣದ ಲವಲೇಶವೂ ಸಂಸ್ಕಾರವಿಲ್ಲದ ತನ್ನ ಮಗಳನ್ನು ಆ ವಿಧುರನ ಕೊರಳಿಗೆ ಕಟ್ಟಿ ಬುಜ್ಜಪ್ಪನು ಕೃತಾರ್ಥನಾಗಿದ್ದನು. ಮತ್ತೊಬ್ಬನನ್ನು ಮೋಸಗೊಳಿಸಹೋಗಿ ತಾನೇ ಮೋಸಹೋಗುವ ಲೋಕದ ರೂಢಿಯಂತೆ ಅವರಿಬ್ಬರ ಗತಿಯೂ ಆಗಿತ್ತು. ನರಸನಗೌಡನು ತನ್ನ ಕಲಪು, ಕಾಮಿನಿಸಿಹಾ ಆಯಿಲ್ಲುಗಳ ಆಡಂಬರದಿಂದ ಬುಜ್ಜಪ್ಪನನ್ನು

ಮೋಸಗೊಳಿಸಿದ್ದರೂ ಸರಸಕ್ಕನ ಎದುರಿಗೆ ಅವುಗಳ ಆಟವು ನಡೆಯಲಿಲ್ಲ. ಅದರಿಂದ ಗೌಡರು ತುಸ ದಿನಗಳಲ್ಲಿಯೇ ಸಾಚಿಕೊಂಡರು; ಬುದ್ಧಿಗಲಿತರು; ಅದೇಕೆ? ಬೆಣ್ಣೆಯಂತೆ ತೀರ ಮೆತ್ತಗಾದರು. ಅವರ ಆ ಮೋಸಗಾರಿಕೆಯೇ ಅವರನ್ನು ಆಳಕಿಸಲಿಕ್ಕೆ ಮುಗುದಾಣದಂತೆ ನಮ್ಮ ಸರಸಕ್ಕನಿಗೆ ಅನುಕೂಲವಾಯಿತು.

ಎರಡನೇ ಹೆಂಡತಿಯ ಗಂಡನು ತನ್ನ ಆ ಹೆಂಡತಿಯ ನೆಳಲಿಗೆ ಸಹ ಹೆದರಿ ನಡೆಯುತ್ತಿರುತ್ತಾನೆ. ಅವನು ಹಾಗೇಕೆ ಅಂಜುತ್ತಿರುತ್ತಾನೆಂಬದು ಮಾತ್ರ ಅನುಭವವಿಲ್ಲದವರು ಹೇಳಲಿಕ್ಕೂ ಸಾಧ್ಯವಿಲ್ಲ-ಕೇಳಲಿಕ್ಕೂ ಸಮರ್ಥರಲ್ಲ. ಆ ಸಂಗತಿಯನ್ನು ತದ್ವಿಷಯದ ಅನುಭವಿಕರೇ ಮೂಕಭಾವದಿಂದ ಹೇಳಬೇಕು; ಕಿವುಡರಾಗಿ ಕೇಳಬೇಕು. ನರಸನಗೌಡನಂತೂ ತನ್ನ ವಯಸ್ಸಿನಬಗ್ಗೆ ಸುಳ್ಳುಹೇಳಿ ಸರಸಕ್ಕನನ್ನು ವರಿಸಿದ್ದನು. ಅಂದ ಮೇಲೆ ಅವನು ಕುಳಿತಾಗ-ನಿಂತಾಗ, ಎಚ್ಚರಿದ್ದಾಗ-ಮಲಗಿದಾಗ ಅವಳಿಗೆ ಹೆದರುತ್ತಿದ್ದನೆಂದು ಹೇಳಿದರೆ ಅರಿದೇನು? ಸರ್ಕಸ್ಸಿನವರು ಸಿಂಹಗಳನ್ನು ಹೇಗೆ ತಮ್ಮ ಅಧೀನಪಡಿಸಿಕೊಂಡಿರುವರೋ, ಹಾಗೆ ತಮ್ಮ ಗಂಡಂದಿರನ್ನು ಬೊಗ್ಗಿಸಿ ನಡಿಸಿಕೊಳ್ಳುವದು ಎರಡನೇ ಹೆಂಡಂದಿರ ಧರ್ಮವೇ ಆಗಿರುತ್ತದೆ. ಇದರಿಂದ ಅಟಕದವರೆಗೆ ಮರಾಟರ ವಿಜಯಧ್ವಜವನ್ನು ಒಯ್ದು ನಿಲ್ಲಿಸಿದ ರಘುನಾಥರಾವ ಪೇಶ್ವೆ ಉರ್ಫ "ರಾಘೋಭರಾರಿ"ಯಂತಹ ಇತಿಹಾಸ ಪ್ರಸಿದ್ಧ ವೀರನೂ ತನ್ನ ಎರಡನೇ ಹೆಂಡತಿಯಾದ ಆನಂದೀಬಾಯಿಯ ನೀಚ ಕಾರಸ್ಥಾನಗಳಿಗೆ ಒಳಗಾಗಿ, ವಂಶಚ್ಛೇದದಂತಹ ದುಷ್ಕೃತ್ಯಗಳಿಗೆ ಮನಸೋತು ಲೋಕದವರ ನಿಂದೆಗೆ ಕಾರಣನಾದನು. ತನಗೆ ಏತರಿಂದ ಮರಣವು ಪ್ರಾಪ್ತವಾಗುವದೆಂಬ ನಿಶ್ಚಯಜ್ಞಾನವುಳ್ಳ ಪಂಡುರಾಜನಂಥ ಮಹಾಜ್ಞಾನಿಯೂ ಕೂಡ ತನ್ನ ಎರಡನೇ ಹೆಂಡತಿಯ ಮೋಹಕ್ಕೆ ಮನಸೋತು ಅವಳೊಡನೆ ಸಂಗಮಾಡಿದ್ದರಿಂದ ಅಕಾಲದಲ್ಲಿ ದೇಹವಿಸರ್ಜನ ಮಾಡಿಕೊಳ್ಳಬೇಕಾಯಿತು. ಇತಿಹಾಸದಲ್ಲಿ ಎಷ್ಟೋ ಉದಾಹರಣೆಗಳನ್ನು ಕಾಣಬಹುದಾಗಿದೆ. ಅವು ಈಗಲೂ ಕಾಣುತ್ತವೆ. ಮುಂದೆಯೂ ಕಾಣುವವು. ಆದುದರಿಂದ ನಮ್ಮ ಪ್ರಿಯ ಎರಡನೇ ಹೆಂಡತಿಯ ಪತಿಗಳೇ, ನೀವು ನಿಮ್ಮ ದ್ವಿತೀಯ ಪತ್ನಿಯ ಜಾಲದಲ್ಲಿ ಸಿಕ್ಕು ಮಂಗಗಳಂತೆ ನಾನಾಬಗೆಯ ಚೇಷ್ಟೆಗಳನ್ನು ಮಾಡಹತ್ತಿದರೆ ತಪ್ಪೇನು?

ಸರಸಕ್ಕನು ಮುಂಬಯಿಗೆ ಹೋಗಿ ಇರಹತ್ತಿದ ತುಸ ದಿನಗಳಲ್ಲಿಯೇ ಅವಳು ನರಸನಗೌಡನನ್ನು ಮೆತ್ತಗೆ ಮಾಡಿದಳು. ತಾನು ಈ ಸಂಬಂಧ ವನ್ನು ಏಕೆ ಗಂಟುಹಾಕಿಕೊಂಡೆನೋ ಎಂದು ಅವನಿಂದ ಅನಿಸಿಬಿಟ್ಟಳು! ನರಸನಗೌಡನು ತುಸ ಇಳಿವಯಸ್ಸಿನವನೆಂಬದೊಂದೇ ಅವನಲ್ಲಿ ಕಳಂಕ ವಿತ್ತು. ಉಳಿದ ಯಾವ ವಿಷಯಗಳಲ್ಲಿಯೂ ಅವನಲ್ಲಿ ಕುಂದುಕೊರತೆಗೆ ಳಿರಲಿಲ್ಲ. ಅವನು ಒಂದು ನಾಮಾಂಕಿತ ಕಂಪನಿಯಲ್ಲಿ ದೊಡ್ಡ ಸಂಬಳದ ನೌಕರನಿದ್ದನು; ಅಲ್ಲದೆ ಆ ಕಂಪನಿಯ ರಿವಾಜಿನಂತೆ ಆತನಿಗೆ ವರ್ಷಕ್ಕೆ ಸಾವಿರೆರಡು ಸಾವಿರ ರೂಪಾಯಿಗಳವರೆಗೆ ಬೋನಸ್ಸು ಸಹ ದೊರೆಯು ತ್ತಿತ್ತು. ಅದರಿಂದ ಅವನು ಮನೆಯಲ್ಲಿ ಬೇಕಾದಷ್ಟು ವಸ್ತ-ಒಡಿವೆಗ ಳನ್ನು ಮಾಡಿಸಿದ್ದನು. ಆತನು ತನ್ನ ಮೊದಲನೇ ಹೆಂಡತಿಯ ಮೈಮೇಲಿ ಟ್ಟಿದ್ದ ಎಲ್ಲ ಆಭರಣಗಳನ್ನೂ ಸರಸಕ್ಕನಿಗೆ ಇಟ್ಟಿದ್ದನಲ್ಲದೆ, ದೇಶಾಚಾರ ದಂತೆ ಸವತಿಭಂಗಾರವೆಂದು ಒಂದು ಸೇರು ಚಿನ್ನದ ಹೊಸ ತೋಡೆಗೆ ಳನ್ನೂ, ಚಂದ್ರಹಾರ, ಮೋಹನಮಾಲೆಗಳೆಂಬ ನವನಾಗರಿಕತೆಯ ವಸ್ತ ಗಳನ್ನೂ ಇಟ್ಟಿದ್ದನು. ನರಸನಗೌಡನ ಮೊದಲನೇ ಹೆಂಡತಿಗಾದ ಒಂದು ಗಂಡುಕೂಸು ಅವಳು ಇರುವಾಗಲೇ ಗತಿಸಿಹೋಗಿತ್ತಾದ್ದರಿಂದ ಸವತಿಯ ಮಕ್ಕಳ ಕಾಟವು ಕೂಡ ನಮ್ಮ ಸರಸಕ್ಕನಿಗಿರಲಿಲ್ಲ. ತನ್ನ ಎರಡನೇ ಹೆಂಡ ತಿಯು ತನ್ನನ್ನು ಪ್ರೀತಿಸಬೇಕೆಂದು ನಾನಾಬಗೆಯ, ಹೊಸ ಹೊಸ ನಮೂ ನೆಯ ಎಷ್ಟು ಸೀರೆಗಳನ್ನು ಅವನು ಅವಳಿಗೆ ತಂದುಕೊಡುತ್ತಿದ್ದನೆಂಬ ದರ ಲೆಕ್ಕವೇ ಇರಲಿಲ್ಲ. ಸರಸಕ್ಕನ ಬಾಯಿಂದ ಇಂಥದೊಂದು ಜೀನಸು ಬೇಕೆಂಬ ಮಾತು ಹೊರಡುವದೊಂದೇ ತಡ, ನರಸನಗೌಡನು ಅದನ್ನು ತಂದನೆಂದೇ ತಿಳಿಯಬೇಕು. ತನ್ನ ಹೆಂಡತಿಯ ಮನವೊಲಿಸುವ ಕಾರ್ಯ ವೊಂದೇ ಅವನ ಈಗಿನ ದೈನಿಕ ಕಾರ್ಯವಾಗಿದ್ದು, ಅದಕ್ಕಾಗಿ ಆತನು ಸದಾಸರ್ವದಾ ತತ್ಪರನಾಗಿರುತ್ತಿದ್ದನು.

ಇಷ್ಟು ಆ ಗೌಡನು ಎಡಬಿಡದೆ ಅವಳ ಸುಖಕ್ಕಾಗಿ ಹೆಣಗುತ್ತಿದ್ದರೂ ಅವಳಿಗೆ ಮಾತ್ರ ಅದರಿಂದ ಕೊಂಚವೂ ಸುಖ-ಸಮಾಧಾನವಾಗುತ್ತಿರ ಲಿಲ್ಲ. ಹೆಂಗಸರ ನಿಜವಾದ ಸೌಖ್ಯಾಗಾರವೆಂದರೆ ಅವರ ಪತಿಯು. ಪ್ರೀತಿಯ ಗಂಡುಳ್ಳ ಸತಿಗಳೇ ನಿಜವಾದ ಸೌಖ್ಯದ ತೆರೆಗಳಲ್ಲಿ ಲೋಲಾ ಡುತ್ತಿರುತ್ತಾರೆ; ಆದರೆ ಪ್ರೀತಿಯ ಗಂಡನಿರದ ಪತ್ನಿಗೆ ವಿಪುಲವಾದ ಸಂ-

ಪತ್ತು, ಅಧಿಕಾರ ಇವುಗಳಿಂದ ನಿಜವಾದ ಸುಖವೆನಿಸುವದಿಲ್ಲವಷ್ಟೇ ಅಲ್ಲ; ಅವು ಅವಳಿಗೆ ತಿರಸ್ಕರಣೀಯುಗಳಾಗಿ ತೋರಹತ್ತುತ್ತವೆ. ನಮ್ಮ ಸರಸಕ್ಕ ನಿಗಾದರೂ ಹೀಗೆಯೇ ಆಗಿತ್ತು. ಅವಳಿಗೆ ಅವಳ ಮನಸಿನ ತಕ್ಕಂತಹ ತರುಣ ಗಂಡನಿರಲಿಲ್ಲ ದುಪ್ಪಟ್ಟೀ ದೊಡ್ಡಪ್ಪನಾಗಿರುವ ಮುದುಕನು ಅವಳ ಕೈ ಹಿಡಿದಿದ್ದನು. ತಂದೆಯ ಒತ್ತಾಯಕ್ಕಾಗಿಯೂ, ಜನಲಜ್ಜೆಯ ನಿಮಿತ್ಯ ಕ್ಕಾಗಿಯೂ ಅವಳು ಅವನೊಡನೆ ಲಗ್ನವಾಗಿದ್ದಳು. ತನಗೆ ಪ್ರೇಮಲ ಪತಿಯು ದೊರೆಯಲೆಂದು ಪ್ರತಿಯೊಬ್ಬ ಯುವತಿಯೂ ಪರಮೇಶ್ವರನನ್ನು ಪ್ರಾರ್ಥಿಸುತ್ತಿರುತ್ತಾಳೆ; ಆದರೆ ಎಲ್ಲರಿಗೂ ಅವರವರ ಇಚ್ಛೆಯಂತಹ ಗಂಡ ನೆಲ್ಲಿ ದೊರಕುವನು? ಎಷ್ಟೋ ತರುಣಿಯರಿಗೆ ಅವರ ಮನಸ್ಸಿಗೆ ಬೇಡಾದ ಗಂಡನೇ ದೊರಕುವನು! ಅಂದಮೇಲೆ ವಾಚಕರೇ, ಅಂಥ ನವತರುಣಿಯು ತನ್ನ ಗಂಡನ ಕೂಡ ಹೇಗೆ ಸುಖದಿಂದ ಜೀವಿಸಬೇಕೆಂಬದನ್ನು ನೀವೇ ಹೇಳಿರಿ.

ನರಸನಗೌಡನು ಸರಸಕ್ಕನ ಪ್ರತಿಯೊಂದು ಇಚ್ಛೆಯನ್ನು ಪೂರ್ಣ ಗೊಳಿಸಲು ತತ್ಪರನಾಗಿರುತ್ತಿದ್ದರೂ, ಅವನು ಸ್ವಭಾವತಃ ಮಿತವ್ಯಯಿ ಯಾಗಿದ್ದನು. ತಾನಾಗಿ ಆತನು ಯಾವ ಖರ್ಚಿನ ಬಾಬಿಗೂ ಮನಸ್ಸು ಮಾಡುತ್ತಿರಲಿಲ್ಲ. ಅತ್ಯವಶ್ಯದ ಪದಾರ್ಥವನ್ನೇ ಅವನು ಕೊಳ್ಳುತ್ತಿದ್ದನು. ಹೀಗಿದ್ದರೂ ಸರಸಕ್ಕನ ಸಲುವಾಗಿ ಆತನು ತನ್ನ ಆ ಕಂಜೂಷತನವನ್ನು ಈಚೆಗೆ ಬಹುಮಟ್ಟಿಗೆ ಸಡಿಲುಮಾಡಿದ್ದನು. ಆದರೂ ಹುಟ್ಟುಗುಣವು ಹುಗಿದರೂ ಹೋಗಲಾರದೆಂಬಂತೆ ಆತನಲ್ಲಿಯು ಆ ಗುಣವಾದರೂ ಸಂಪೂ ರ್ಣವಾಗಿ ಅಳಿದಿರಲಿಲ್ಲ. ಕಲಿತ ಬುದ್ಧಿಯೂ ಕಟ್ಟಿದ ಬುತ್ತಿಯೂ ಎಲ್ಲಿಯ ವರೆಗೆ ಪೂರೈಸಬೇಕು? ಅದರಿಂದ ಆ ದ್ವಿತೀಯ ಪತ್ನಿಯು ತನ್ನ ಮನೆಗೆ ಬಂದ ತಿಂಗಳೆರಡು ತಿಂಗಳಲ್ಲೇ ನರಸನಗೌಡನ ಆ ಕಡತಂದ ಉದಾರ ತನವು ಬತ್ತಹತ್ತಿ, ತನ್ನ ಮೂಲಮಿತವ್ಯಯದ ಮೆಟ್ಟಲಿಗೆ ಹೋಗಿನಿಂತಿತು.

ಪಟ್ಟಣಿಗರ ಸಂಸಾರವು ತೋರಿಕೆಯಲ್ಲಿ ಎಷ್ಟು ಭವ್ಯವಾಗಿ ತೋರ್ರು ವದೋ, ಅದು ನಿಜವಾಗಿ ಅಷ್ಟು ಭವ್ಯವಾಗಿರುವದಿಲ್ಲ. ಖುರ್ಚಿ, ಟೇಬಲ್ಲು, ಕಪ್ಪು, ಬಸಿ, ಬೂಟು, ಸಾಯಿಕಲ್ಲು ಇವು ಶಹರವಾಸಿಗಳಿಗೆ ತೀರ ಸಾಮಾ ನ್ಯವಾದ ವಸ್ತುಗಳಾಗಿವೆ. ಇವುಗಳ ಮೇಲಿಂದ ಆ ಮನೆಯವರ ಸುಖ- ಸಂಪತ್ತುಗಳ ವಿಷಯವಾಗಿ ತರ್ಕಿಸುವದು ಸಾಧ್ಯವೇ ಇಲ್ಲದಾಗಿದೆ. ಪಟ್ಟ

ಣಿಗೆನಾದ ಒಬ್ಬ ಕೇವಲ ದರಿದ್ರ ಕ್ಷುರಕನಲ್ಲಿಯೂ ಈ ಎಲ್ಲ ಜೀನಸುಗಳು ಇರುತ್ತವೆ. ಇಷ್ಟೇಕೆ? ಪಟ್ಟಣದಲ್ಲಿ ವಾಸಿಸಬೇಕೆಂಬುವವನಿಗೆ ಮೇಲೆ ಹೇಳಿದ ಖುರ್ಚಿ ಮೊದಲಾದ ಜೀನಸುಗಳನ್ನು ಮೊದಲು ಸಂಗ್ರಹಮಾಡಿ ಕೊಂಡೇ ತನ್ನ ಸಂಸಾರಕ್ಕೆ ಉಪಕ್ರಮಿಸಬೇಕಾಗುತ್ತದೆ. ಬೆಂಗಳೂರ ಲ್ಲಿಯ ಯಾವನೊಬ್ಬನ ಮನೆಯ ವಿದ್ಯುದ್ದೀಪವನ್ನು ಕಂಡು ಅವನ ಸಾಂಪ ತ್ತಿಕಸ್ಥಿತಿಯನ್ನು ನಿಷ್ಕರ್ಷಿಸುವದು ಹೇಗೆ ಅಸಾಧ್ಯವೋ, ಹಾಗೆಯೇ ಪಟ್ಟ ಣಿಗರಲ್ಲಿಯ ಆಧುನಿಕ ಫ್ಯಾಶನೇಬಲ್ ಜೀನಸುಗಳನ್ನು ಕಂಡು ಅವರ ಸ್ಥಿತಿ ಗತಿಯನ್ನು ನಿಷ್ಕರ್ಷಿಸುವದು ದುಸ್ತರವಾಗಿದೆ. ಮೇಲೆ ಹೇಳಿದ ಖುರ್ಚಿ ಮೊದಲಾದ ಜೀನಸುಗಳಿಂದ ಯಾವನೊಬ್ಬನ ಇರುವಿಕೆಯನ್ನು ನಿಷ್ಕರ್ಷಿ ಸುವದು ಹೇಗೆ ಕಠಿಣವಾಗಿದೆಯೋ ಹಾಗೆಯೇ ಈಚೆಗೆ ಈ ಚೈನೀವಸ್ತುಗಳ ಮಹತ್ವವೂ ಇಳಿದುಹೋಗಿದೆ. ಇರಲಿ.

ಎರಡನೇ ಹೆಂಡಂದಿರಿಗೆ ಮುಖ್ಯವಾಗಿ ಬೇಕಾದದ್ದು ಮನಸೋಕ್ತ ಚೈನಿಯು-ಆಚಾರವಿಚಾರಗಳು. ಅವರ ವಿಚಾರಗಳಂತೆ ಅವರ ಗೆಂಡಂದಿರು ನಡೆದುಬಿಟ್ಟಮಾತ್ರಕ್ಕೆ ಅವರಿಗೆ ಸಮಾಧಾನವೆನಿಸುವದಿಲ್ಲ; ಆದರೆ ಅದರಂತೆ ಅವರ ಗಂಡಂದಿರೂ ಆಚರಿಸಿದರೆ-ನಡೆದರೆ ಮಾತ್ರ ಅವರಿಗೆ ನಿಜ ವಾದ ಸಮಾಧಾನವಾಗುವದು. ಒಬ್ಬ ಎರಡನೇ ಹೆಂಡತಿಗೆ ಪಿಯಾನೋ ಪೆಟ್ಟಿಗೆ ಬಾರಿಸಬೇಕೆಂಬ ಇಚ್ಛೆಯಾಯಿತೆಂದು ಕಲ್ಪಿಸೋಣ. ಅವಳ ಇಚ್ಛೆ ಗನುಸರಿಸಿ ಅವಳ ಉಗುಳುಕೂಡ ದಾಟದಂತಹ ಅವಳ ವೃದ್ಧಪತಿಯು ಅದನ್ನು ಮರುದಿನವೇ ತಂದುಕೊಡುವನು; ಆದರೆ ಇಷ್ಟರಿಂದ ಅವಳಿಗೆ ನಿಜವಾದ ಸಮಾಧಾನವೆಂದೂ ಆಗಲಾರದು. ಆ ಹೊಸ ಪೆಟ್ಟಿಗೆಯನ್ನು ತಕ್ಕೊಂಡು ತನ್ನ ಗಂಡನು ತನ್ನೊಡನೆ ಮೇಲಟ್ಟದ ಬೈಲುಪಡಸಾಲೆಯಲ್ಲಿ ಕುಳಿತು, ತನ್ನ ಕಡೆಗೆ ಆಗಾಗ್ಗೆ ಓರೆನೋಟದಿಂದ ನೋಡುತ್ತ, ಅಪದ್ಧವಾ ಗಲಿ-ಸುಪದ್ಧವಾಗಲಿ ಅದನ್ನು ಬಾರಿಸಿದರೆ ಮಾತ್ರ ಅವಳಿಗೆ ನಿಜವಾದ ಸಮಾಧಾನವಾಗುವದು.



## ಎರಡನೇ ಓರೆನೋಟ.

ಆದರೆ ನರಸಗೌಡನು ೨ನೇ ಹೆಂಡತಿಯ ಗಂಡನಾದುದರಿಂದ ಅವನು ಸರಸಕ್ಕನ ಕೂಡ ಅಷ್ಟೊಂದು ಸಲಿಗೆಯಿಂದ ಹೇಗೆ ನಡೆದಾನು? ಆತನು ಒಂದು ದಿನವೂ ಅವಳೊಡನೆ ಚೌಪಾಟಿಯ ಮೇಲೆ ತಿರುಗಾಡಲಿಕ್ಕೆ ಹೋಗ ಲಿಲ್ಲ; ನಾಟಕ-ಸಿನೇಮಾಗಳಿಗೂ ಹೋಗಲಿಲ್ಲ. ಆತನು ಸದಾ ತನ್ನ ನೌಕ ರಿಯ ಉದ್ಯೋಗದಲ್ಲಿಯೇ ಲೀನನಾಗಿರುತ್ತಿದ್ದನು. ಆತನ ನೌಕರಿಯೇ ಅಷ್ಟು ಜವಾಬುದಾರಿಯದಿದ್ದಿತು. ಎಷ್ಟು ಬೇಗ ಮುಗಿಸಬೇಕೆಂದರೂ ಬೆಳಗಿನ ೧೦ ಗಂಟೆಗೆ ಪ್ರಾರಂಭವಾದ ಅವನ ಕೆಲಸವು ಸಂಜೆಯ ಐದು ಹೊಡೆದು ಎಷ್ಟೋ ಮಿನೀಟುಗಳಾದರೂ ತೀರುತ್ತಲೇ ಇರಲಿಲ್ಲ. ಆ ಆಫೀಸಿನ ಕೆಲಸದ ಗಡಬಿಡಿಯಲ್ಲಿ ಉಣಲಿಕ್ಕೆ ಕೂಡ ಅವನಿಗೆ ಅವಸರ ವಿದ್ದಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯೆನಿಸಲಾರದು. ಹಬ್ಬ-ಹುಣ್ಣಿವೆ ಗಳಿಗೆ ಕೂಡ ಅಲ್ಲಿ ಸೂಟಿಯಿರುತ್ತಿರಲಿಲ್ಲ. ಅದರಿಂದ ಮೊದಲೇ ಅರಸಿಕ ಸ್ವಭಾವದ ನಮ್ಮ ನರಸನಗೌಡನಿಗೆ ತನ್ನ ದ್ವಿತೀಯ ಕುಟುಂಬದ ಹವ್ಯಾಸ ಪೂರೈಸದಿರುವದಕ್ಕೆ ಅದೊಂದು ಸ್ವತಃಸಿದ್ಧವಾದ ನೆವವಾಗಿತ್ತು.

ಯಾವದೊಂದು ದಿನ ಏನಕೇನ ಪ್ರಕಾರದಿಂದ ತುಸ ಅವಕಾಶ ದೊರೆತರೆ, ತಮ್ಮ ಹೆಂಡತಿಯ ಕೂಡ ಅಡ್ಡಾಡಲಿಕ್ಕಾಗಲಿ, ನಾಟಕ- ಸಿನೇಮಾಗಳಿಗೆ ಹೋಗಲಿಕ್ಕಾಗಲಿ ಅವರಿಗೆ ನಾಚಿಕೆ ಬರುತ್ತಿತ್ತು. ಎರ ಡನೇ ಸಂಬಂಧದ ಗಂಡಹೆಂಡಿರಲ್ಲಿ ವಿತುಷ್ಟತೆಯನ್ನುಂಟು ಮಾಡಲಿಕ್ಕೆ ಯಾವ ಯಾವ ಸಂಗತಿಗಳು ಘಟಿಸುತ್ತವೆಯೋ ಅವುಗಳಲ್ಲಿ ನಾಚಿಕೆಯೆಂಬ ಬಲವಾದ ಮನೋದೌರ್ಬಲ್ಯವು ಮುಖ್ಯವಾಗಿರುತ್ತದೆ. ಆ ನಾಚಿಕೆಯ ಮೂಲಕ ದ್ವಿತೀಯ ಸಂಬಂಧದವರಲ್ಲಿ ಎಂದೂ ಐಕ್ಯವುಂಟಾಗುವದಿಲ್ಲ. ಸಮವಯಸ್ಕನಾದ ಗಂಡನ ಎದುರಿಗೆ ಹೆಂಡಂದಿರು ತಮ್ಮ ಮನೀಷೆಗಳ ನ್ನು ಸಂಕೋಚವಿಲ್ಲದೆ ತಿಳಿಸುತ್ತಾರೆ; ಪತಿಯಗೂಡ ಕುಚುಕುಚು ಮಾತಾಡ ಲಿಕ್ಕೆ ಅವರಿಗೊಳ್ಳೇ ಹುರುಪು ಬರುತ್ತದೆ; ಆದರೆ ಪತಿಯು ತನಗಿಂತ ಬಹಳ ದೊಡ್ಡವನಿದ್ದನೆಂದರೆ ಅವನೊಡನೆ ಅ[illegible] ಸಂಕೋಚಿತರಾ[illegible]ತ ರಾಗಿ ವರ್ತಿಸಬೇಕಾಗುವದು. ಪತಿ[illegible]ಯಂತ ಬ[illegible] ಅವನಲ್ಲಿ ಅ[illegible] ಸ್ವಾತ್ಯ[illegible]ವರೂ

ಹೆಂಡತಿಯು ಪತ್ತು (ಪರಸ್ಪರ ಸಹಕಾರ) ಇರಲೇ ಬೇಕು. ಅದಿರದಂಥ ತಮಗಿಂತ ನಾಲ್ಕಾರುಪಟ್ಟು ವಯಸ್ಸಿನಿಂದ ಹಿರಿಯನಾದ ಗೃಹಸ್ಥನಿಗೆ ಪತಿ ಯೆಂದು ಆ ನವತರುಣಿಯರು ಒಪ್ಪುವದಾದರೂ ಹೇಗೆ? ಮನಸ್ಸಿನಿಂದ ಒಪ್ಪದಿದ್ದರೂ ಜನಲಜ್ಜೆಗೆ—ಅಲ್ಲ ಅಲ್ಲ ಜನರ ಒತ್ತಾಯಕ್ಕೆ ಅವರು ಒಪ್ಪಿ ಯೇ ತೀರಬೇಕಾಗುವದು.

ಎರಡನೇ ಹೆಂಡತಿಗೆ ಮೇಲೆ ಹೇಳಿದಂತೆ ಒಂದು ಬಗೆಯಿಂದ ಸಂ-ಕೋಚ ಮನಸ್ತಾಪಗಳುಂಟಾದರೆ, ಅವಳ ವೃದ್ಧಪತಿಗೂ ಬೇರೊಂದು ಬಗೆಯಿಂದ ತೊಂದರೆಯೇ ಉಂಟಾಗುತ್ತದೆ. ಆ ಪ್ರೌಢವಯಸ್ಸಿನ ಗಂಡಂ ದಿರಿಗೆ ವಯೋಮಾನದಂತೆ ಅವರ ಅಭಿರುಚಿಯೂ ಪ್ರೌಢತರದ್ದಾಗಿರುತ್ತದೆ. ಅದರಿಂದ ತಮ್ಮ ನವತರುಣ ಹೆಂಡತಿಗೆ ಪ್ರತಿಯಾಗಿ ಚೇಷ್ಟೆ ಮಾಡಲಿಕ್ಕೆ ಅವರ ಮನಸ್ಸು ಒಗ್ಗುವದಿಲ್ಲ. ಗಂಡಹೆಂಡರಿಬ್ಬರೂ ಸಮ ವಯಸ್ಸಿನ ತರುಣ ರಿದ್ದರೆಂದರೆ ಮಂದಿಯೇನೆಂದಾರೆಂಬದರ ಕಡೆಗೆ ವಿಶೇಷ ಲಕ್ಷಗೊಡದೆ ಪ್ರಸಂಗಸಾಧಿಸಿ ಪರಸ್ಪರರ ಚೇಷ್ಟೆ ಮಾಡುತ್ತಲಿರುತ್ತಾರೆ. ಈ ತರದ ವರ್ತನದಿಂದ ಅವರಲ್ಲಿಯ ಪ್ರೇಮವು ಕುಂದುಕೊರತೆ ಹೊಂದದೆ ಹೆಚ್ಚೆ ಚ್ಚು ವೃದ್ಧಿಂಗತವಾಗುತ್ತಿರುತ್ತದೆ. ಆದರೆ ಆದೇ ಒಬ್ಬ ನವತರಣಿಯು ತನ್ನ ದಿನಹೋದ ಪತಿಗೆ ಯಾವದೊಂದು ಬಗೆಯಿಂದ ಪ್ರೇಮದಿಂದ ಕೆಣ ಕಿದರೂ ಆ ಪ್ರೌಢ-ಶುಂಭ-ಪತಿಯು ಅವಳ ಮೇಲೆ ಸಿಟ್ಟಾಗುವನು. ಅದ ರಿಂದ ಅವರಲ್ಲಿಯ ಅನುರಾಗವು ಸಂಕುಚಿತವಾಗಹತ್ತಿ ಕೆಲದಿನಗಳಲ್ಲಿ ಲುಪ್ತವಾಗಿ ಬಿಡುವದು. ನಮ್ಮ ಸರಸಕ್ಕನು ಒಂದು ದಿನ ಒಳ್ಳೇ ಗೊಗ್ಗ ರದನಿಯಿಂದ “ನಮಾಮಿಗಂಗೇ ತವಪಾದ ಪಂಕಜಂ |ಸುರಾಸುರೈರ್ವಂದಿತ ದಿವ್ಯ ಲೋಕಂ|| ಭುಕ್ತಿಂಚ-ಮುಕ್ತಿಂಚ-ದದಾಸಿ ನರಾಣಾಂ | ಭಾವಾನು ಸಾರೇಣ ಸದಾನರಾಣಾಂ || ” ಎಂದೆನ್ನುತ್ತ ಪ್ರಾತಃಸ್ನಾನ ಮಾಡುತ್ತಿದ್ದ ತನ್ನ ಪತಿಯ ಮೈಮೇಲೆ ಚೇಷ್ಟೆಯಿಂದ ಕೆಲ ಹನಿಗಳನ್ನು ಸಿಡಿಸಿದಳು ಮಾತ್ರ. ಆಗ ತಾನೂ ಅವಳ ಮೇಲೆ ನೀರು ಉಗ್ಗಬೇಕೆಂಬ ಇಚ್ಛೆಯು ನರಸನಗೌಡನಿಗೆ ಉಂಟಾಯಿತು. ಆಷ್ಟರಲ್ಲಿ ತಾನು ಹಾಗೆ ಮಾಡುವದು ಸರಿಯಲ್ಲೆಂದು ಅವನಿಗೆನಿಸಿದ್ದರಿಂದ ಅವನು ಕಿಡಿಗಣ್ಣಿನಿಂದ ಅವಳ ಕಡೆಗೆ ನೋಡುತ್ತ—ಅತ್ಯಂತ ಮಲಿನಃಕಾಯೋ ನವಚ್ಛಿದ್ರ ಸ್ಸಮನ್ವಿತಃ” ಎಂದು ಒದರುತ್ತ ಅಲ್ಲಿಂದ ಹೊರಟು ಹೋದನು. ನಡೆಯಿಲಿ, ನಿಮ್ಮ ಗಂಗಾ

ಷ್ಟಕವು ಎಂದು ಮನದಲ್ಲಿ ಅಂದುಕೊಳ್ಳುತ್ತ ವಿತುಷ್ಟ, ಮನಸ್ಸುಳ್ಳಾದ ಸರ ಸಕ್ಕನೂ ಬೇರೆ ಕಡೆಗೆ ನಡೆದಳು.

ವಾಚಕರೇ, ಗಂಡನು ಹೆಂಡತಿಗಿಂತ ವಿಶೇಷ ಪ್ರೌಢನಿರಬಾರದು ಕಂಡಿರಾ. ಗಂಡನೆಂದರೆ ಮದನನ ಉಪವನದೊಳಗಿನ ಹೂವಿನಂತಿರ ಬೇಕು. ಅವನು ಅದರಂತೆ ಸುವಾಸನೆಯುತನೂ, ಸೌಂದರ್ಯಯುತ ನೂ ಇರಬೇಕಲ್ಲದೆ, ಅವಾಸ್ತವದೇಹಭಾರವುಳ್ಳವನಿರಕೂಡದು. ಹುಣೇ ದಂಥ ಅಕ್ರಾಳ ವಿಕ್ರಾಳ ಸ್ವರೂಪದವನನ್ನು ಕೋಮಲ ತನುಲತಿಕೆಯರು ಗಂಡನೆಂದು ಒಪ್ಪುವದಾದರೂ ಹೇಗೆ? ಅಂಥ ಯಾವನೊಬ್ಬ ಗೃಹಸ್ಥನು ವಂದ್ಯನಿರಬಹುದು, ಪರಮಪವಿತ್ರನಿರಬಹುದು, ಗುರುಹಿರಿಯನಾಗಲಿಕ್ಕೆ ಯೋಗ್ಯನಿರಬಹುದು; ಆದರೆ ಅಂಥವನು ನವತರುಣಿಯರ ಪತಿಯಾಗ ಲಿಕ್ಕೆ ಸರ್ವಥಾ ಅಯೋಗ್ಯನಾಗಿರುತ್ತಾನೆ.

ಮತ್ತು ಅದಕ್ಕಾಗಿಯೇ ಸರಸಕ್ಕನು ಸುಖದಿಂದಿದ್ದರೂ ಅವಳಿಗೆ ಹೇಗೆಹೇಗೋ ಅನಿಸುತ್ತಿತ್ತು. ಅವಳಿಗೆ ಇಡೀ ಬ್ರಹ್ಮಾಂಡವು ಇದ್ದೂ ಇಲ್ಲದಂತಾಗಿದ್ದಿತು. ತನ್ನ ಇರವು ಕೂಡ ನಶ್ವರವೆಂದು ಭಾಸವಾಗುತ್ತಿ ತ್ತು. ತನ್ನ ಸಂಸಾರಯಾತ್ರೆಯಲ್ಲಿ ತಾನೇನೆನ್ನೋ ಮರೆತು ಹೊರಟಂತೆ ಅವಳಿಗೆ ಸದಾ ಭಾಸವಾಗುತಲಿತ್ತು. ಏನನ್ನು ಕಳೆದುಕೊಂಡು ನಡೆದಿದ್ದ ಳೋ ಅವಳದವಳಿಗೇ ಗೊತ್ತು! ದಿನಹೋದ ವರನಿಗೆ ತಮ್ಮ ಕುಸುಗುನ್ನ ರಿಯನ್ನು ಕೊಟ್ಟ ತಂದೆತಾಯಿಗಳು ತಮ್ಮ ಅವಿಚಾರವನ್ನು ಜಗತ್ತಿಗೇ ತೋರಿಸುತ್ತಾರೆ. ತಾವು ಆರಿಸಿದ ವರನಲ್ಲಿ ಸಾಕಷ್ಟು ಹಣವಿರುವದರಿಂದ ತುಸ ಹೆಚ್ಚು ವಯಸ್ಸಾದರೇನಾಯಿತು, ತಮ್ಮ ಮಗಳ ಸೌಖ್ಯಕ್ಕೆ ಕೊಂಚವೂ ಕೊರತೆಯುಂಟಾಗದೆಂದು ಕನ್ನೆಯ ಮಾತಾ-ಪಿತೃಗಳು ತಿಳಿ ಯುತ್ತಾರೆ. ಅವರ ಆ ತಿಳಿಗೇಡಿತನಕ್ಕೆ ಏನೆನ್ನಬೇಕೋ ತಿಳಿಯದ ಹಾ- ಗಿರುತ್ತದೆ. ಅಂಥ ಜರಠ-ತರುಣಿಯರ ವಿವಾಹದಲ್ಲಿ ಎಳ್ಳಷ್ಟಾದರೂ ಸುಖವಿರುವದೇನು? ಇಲ್ಲ, ಆ ದಂಪತಿಗಳಲ್ಲಿ ಬೇರೆ ಎಲ್ಲವೂ ಇರುತ್ತದೆ; ಆದರೆ ಸುಖವೊಂದು ಮಾತ್ರ ಇರುವದಿಲ್ಲ.

ನರಸನಗೌಡನು ಉಂಡು ತಿಂದು ಕಚೇರಿಗೆ ಹೋದ ಬಳಿಕ ಸರಸ ಕ್ಕನು ಹೇಗಾದರೂ ನಾಲ್ಕು ತುತ್ತು ನುಂಗಿ ನೀರು ಕುಡಿದು ಆರಾಮಿ ಖುರ್ಚಿಯ ಮೇಲೆ ಅಡ್ಡಾಗಿ ತನಗೆ ಯಾತರಿಂದ ನಿಜವಾದ ಸುಖವು ದೊರೆ

ತೀತೆಂಬದನ್ನು ಆಲೋಚಿಸುತ್ತ ಕುಳಿತಿರುತ್ತಿದ್ದಳು. ಬಗೆಬಗೆಯ ಆಲೋಚನೆಗಳನ್ನು ದಿನಾಲು ಆಲೋಚಿಸಿದರೂ ಸುಖದ ಲವಲೇಶವು ಕೂಡ ಅವಳಿಗೆ ಲಭಿಸಲಿಲ್ಲ; ಅದು ಲಭಿಸುವ ಮಾರ್ಗವೂ ಸಿಗಲಿಲ್ಲ.

ಹೀಗೆ ಒಂದು ದಿನ ಮಧ್ಯಾಹ್ನದ ೧೨ ಗಂಟೆಗೆ ಅವಳು ತಮ್ಮ ಮನೆಯ ವ್ಹರಾಂಡಾದಲ್ಲಿ ಏನನ್ನೋ ಓದುತ್ತ ಕುಳಿತಿರಲು "ಟಂ,ಟಂ, ಟಂ" ಎಂದು ತಾಸೆ ಬಾರಿಸುತ್ತ ಓಣಿಯಲ್ಲಿ ನಡೆದಿದ್ದ ಒಂದು ಕುದುರಿ ಬಂಡಿಯು ಅವಳಿಗೆ ಕಾಣಿಸಿಕೊಂಡಿತು. ಅದು ಪ್ರೊ. ಪರಶುರಾಮಭಾವೂನ ಸರ್ಕಸ್ಸಿನ ಹಸ್ತಪತ್ರಿಕೆಗಳನ್ನು ಹಂಚುವ ಬಂಡಿಯಾಗಿತ್ತು. ಆ ಬಂಡಿಯ ಟಾಪಿನ ಮೇಲೂ, ಹಸ್ತಪತ್ರಿಕೆಗಳ ಮೇಲೂ ಸಿಂಹ, ಹುಲಿ, ಕರಡಿ, ಆನೆ, ಕುದುರೆಗಳ ನಾನಾ ತರದ ಆಟಗಳೂ, ಕಸರತ್ತು ಮಾಡುವವರ ಬಗೆಬಗೆಯ ಚಿತ್ರಗಳೂ ರೇಖಿಸಲ್ಪಟ್ಟಿದ್ದವು. ಅವು ವಾಚಕರ ಮನಸ್ಸನ್ನು ಸೇರಿಕೊಳ್ಳುತ್ತಿದ್ದವಷ್ಟೇ ಅಲ್ಲ, ಅವೆಲ್ಲವುಗಳ ಮಧ್ಯದಲ್ಲಿ ಶಗೆದಿದ್ದ ಒಬ್ಬ ಯುವತಿಯ ಕಸರತ್ತಿನ ಚಿತ್ರವು ಅವೆಲ್ಲಗಳನ್ನೂ ನಾಚಿಸುವಂತಹದಾಗಿತ್ತು.

ಆ ತರುಣಿಯ ಚಿತ್ರವು ಸರಸಕ್ಕನ ದೃಷ್ಟಿಪಥದೆದುರಿಗೆ ಬಂದೊಡನೆ ಅವಳಿಗೂ ಆ ಸರ್ಕಸ್ಸು ನೋಡುವ ಉತ್ಸುಕತೆಯುಂಟಾಯಿತು. ಇಂದು ತಾನು ತನ್ನ ಪತಿಯೊಡನೆ ಆ ಸರ್ಕಸ್ಸಿಗೆ ಹೋಗಲೇಬೇಕೆಂದು ನಿರ್ಧರಿಸಿ ಪತಿಯ ಆಗಮನವನ್ನು ನಿರೀಕ್ಷಿಸುತ್ತ ಕುಳಿತಳು. ಕ್ಷಣಕ್ಷಣಕ್ಕೆ ಸರ್ಕಸ್ಸಿಗೆ ಹೋಗುವ ಅವಳ ಉತ್ಸುಕತೆಯು ಹೆಚ್ಚಾಗಹತ್ತಿತು. ಆದರಿಂದ ಅಂದು ಅವಳಿಗೆ ಯಾವ ಮನೆಗೆಲಸ ಮಾಡಲಿಕ್ಕೂ ಮನಸ್ಸಾಗದಾಯಿತು. ಅವಳ ಕಣ್ಣೆದುರಿಗೆ ಆ ಸರ್ಕಸ್ಸಿನ ಆ ಭವ್ಯಡೇರೆಯೂ ಅದರೊಳಗಿನ ನಾನಾ ಜಾತಿಯ ಹಿಂಸ್ರ ಮೃಗಗಳೂ ಒಂದರ ಹಿಂದೊಂದು ಕುಣಿಯ ಹತ್ತಿದವು. ಕೆಲವೇಳೆಯಲ್ಲಿ ಆ ಸರ್ಕಸ್ಸಿನ ತರುಣಿಯ ಕಲ್ಪನಾಮೂರ್ತಿಯೂ ಅವಳೆದುರಿಗೆ ಬಂದು ನಾನಾ ಬಗೆಯ ಕಸರತ್ತನ್ನೂ ನಾಚನ್ನೂ ಮಾಡತೊಡಗಿತು. ಈ ಕಲ್ಪನಾಮಯದೃಶ್ಯವನ್ನು ದೃಷ್ಟಿಸುತ್ತಿರುವಾಗ ಸರಸಕ್ಕನಿಗೆ ತಂದ್ರಾವಸ್ಥೆಯು ಪ್ರಾಪ್ತವಾಯಿತು. ಕಣ್ಣುಮುಚ್ಚಿಕೊಂಡು ಅವಳು ಆ ಆರಾಮಿ ಖುರ್ಚಿಯ ಮೇಲೆ ಒರಗಿಕೊಂಡಳು. ಸಂಜೆಯ ಆರು ಹೊಡೆದರೂ ಅವಳಿಗೆ ಎಚ್ಚರವಾಗಲಿಲ್ಲ.

ದಿನಾಲು ಐದು ಹೊಡೆಯುತ್ತಲೇ ನರಸನಗೌಡನಿಗಾಗಿ ಚಹ ಮಾಡುವ ಕೆಲಸದಲ್ಲಿ ಸರಕ್ಕನು ತಲ್ಲೀನಳಾಗಿರುತ್ತಿದ್ದಳು. ಅವಳು ಲಗ್ನ ವಾಗಿ ಬಂದು ೩-೪ ತಿಂಗಳುಗಳೇ ಆಗಿದ್ದರೂ ಈ ಅವಧಿಯಲ್ಲಿ ಆ ಕೆಲಸ ವನ್ನು ನಿಯಮಿತವಾಗಿ ಮಾಡುತ್ತಿದ್ದಳು. ಹೀಗಿದ್ದು ಇಂದು ಆರು ಹೊಡೆದರೂ ತನ್ನ ದ್ವಿತೀಯ ಪತ್ನಿಯು ಮಲಗಿಕೊಂಡಿರುವದೇಕೆಂಬ ದರ ಮರ್ಮವು ನಮ್ಮ ಗೌಡನಿಗೆ ತಿಳಿಯಲಿಲ್ಲ. ನಿತ್ಯದಂತೆ ಅವನು ೫|| ಗಂಟೆಗೆ ಮನೆಗೆ ಬಂದು ತನ್ನ ಪೋಷಾಕನ್ನು ಬದಲಿಸಿದನು. ಕೈಕಾಲು ಮೋರೆ ತೊಳಕೊಂಡು ಮನೆಯಲ್ಲಿಯೇ ಕೆಲನಿಮಿಷಗಳ ವರೆಗೆ ಅಡ್ಡಾಡಿದನು. ಆದರೂ ಹೆಂಡತಿಯು ಕುರ್ಚಿಯಿಂದ ಏಳದಾಗಲು, ಈಕೆಗೆ ಜಡ್ಡಾಗಿರಬೇಕೆಂದು ಭಾವಿಸಿ, ಮೆಲ್ಲಗೆ ಅವಳ ರಟ್ಟೆಗೆ ಕೈಹಚ್ಚಿ ನೋಡಿದನು. ಅಷ್ಟರಲ್ಲಿ ಸರಸಕ್ಕನಿಗೆ ಎಚ್ಚರವಾಯಿತು. ಅವಳು ಕಣ್ದೆ ರೆದವಳೇ ಒಮ್ಮೆಲೆ ಎದ್ದು ನಿಂತಳು. ತರುಣಗಂಡನಲ್ಲಿಯೂ ದಿನಹೋದ ಗಂಡನಲ್ಲಿಯೂ ಭೂಮ್ಯಾಕಾಶದಷ್ಟು ಅಂತರವಿರುತ್ತದೆನ್ನುವದಿದಕ್ಕೇ. ಅಂಥ ಸುಶಾಂತ ಹಾಗು ಸುಸಮಯದಲ್ಲಿ ಅದಾವ ತರುಣಪತಿಯು ತನ್ನ ಮನೋ ವಲ್ಲಭೆಯನ್ನು ಈ ರೀತಿ ರಟ್ಟೆಯನ್ನು ಅಲ್ಲಾಡಿ ಎಬ್ಬಿಸಿಯಾನು? ಅವನು ಅವಳನ್ನು ಮನಸೋಕ್ತ ಚುಂಬಿಸಿಯಾಗಲಿ, ಮರ್ದಿಸಿಯಾಗಲಿ ಎಬ್ಬಿಸುವ ದಕ್ಕೆ ಎಂದೂ ಹಿಂದುಮುಂದು ನೋಡಲಿಕ್ಕಿಲ್ಲ; ಆದರೆ ನಮ್ಮ ನರಸನ ಗೌಡನು ಹೇಳಿಕೇಳಿ ದಿನಹೋದವನು. ತನ್ನ ತರುಣ-ಎರಡನೇ ಹೆಂಡತಿ ಯನ್ನು ಚುಂಬಿಸುವ ಧೈರ್ಯವು ಅವನಿಗಿರಲಿಕ್ಕಿಲ್ಲ. ಅಂತೇ ಆತನು ಬೇರೆ ಉಪಾಯದಿಂದ ಅವಳನ್ನೆಬ್ಬಿಸಿದನು. ತಾರುಣ್ಯದೊಳಗಿನ ಧಷ್ಟಪುಷ್ಟ ಶರೀರಗಳು ಇಂಥ ಪರಕೀಯ ಭಾವನೆಯ ಮೂಲಕ ಎಂದೂ ತೃಪ್ತ ವಾಗುವದಿಲ್ಲ. ಗಾಢಾಲಿಂಗನದಿಂದಲೇ ಅವನ್ನು ತೃಪ್ತೀಕರಿಸಿಕೊಳ್ಳಬೇ ಕಾಗುತ್ತದೆ; ಚುಂಬನಮಂತ್ರದಿಂದ ಅವನ್ನು ಪ್ರಸನ್ನೀಕರಿಸಿಕೊಳ್ಳಬೇಕಾ ಗುತ್ತದೆ; ಆದರೆ ಎರಡನೇ ಹೆಂಡಂದಿರ ವೃದ್ಧಪತಿಗಳಿಗೆ ಅದು ಹೇಗೆ ಸಾಧಿಸಬೇಕು? ಅದು ಸಾಧಿಸದ ಮೂಲಕವಾಗಿಯೇ ಎಷ್ಟೋ ಎರಡನೇ ಹೆಂಡಂದಿರು ತಮ್ಮ ಗಂಡಂದಿರ ಮೇಲೆ ಆಗಾಗ್ಗೆ ಹರಿಹಾಯುತ್ತಿರುತ್ತಾರೆ.

ಸರಸಕ್ಕನು ಎಚ್ಚತ್ತು ಎದ್ದು ನಿಂತಳು. ಅವಳ ಕಣ್ಣೆದುರಿಗೆ ಕುಣಿ ಯುತ್ತಿದ್ದ ಆ ಸುಂದರ ತರುಣ ಸ್ತ್ರೀಯು ಕಾಣದಾದಳು. ಆದರೆ ಆ ಸ್ಥಳ

ದಲ್ಲಿ ಮುಪ್ಪಿನ ಕಳೆಯು ಮೂರ್ತಿಮತ್ತಾಗಿ ಸುರಿಯುತ್ತಿದ್ದ ನರಸನಗೌಡನ ತೇಜೋಹಿನ ಮೂರ್ತಿಯು ಕಂಡಿತು. ಈ ಆದೇಶದ ಮೂರ್ತಿಯನ್ನು ಕಂಡು ಸರಸಕ್ಕನ ಮನಸ್ಸು ವಿರಸಹೊಂದಿತು. ನರಸನಗೌಡನ ತೇಜೋಭಂಗಮೂರ್ತಿಯ ದರುಶನವು ಅವಳಿಗೆ ದಿನಾಲು ಇದ್ದೇಇತ್ತು. ಆತನ ಬದಲು ಆ ಮನೋಹರ ಸ್ತ್ರೀಯ ಮೂರ್ತಿಯು ಇನ್ನೂ ಕೆಲಹೊತ್ತು ಅವಳೆದುರಿಗಿದ್ದರೆ ಅವಳಿಗೊಳ್ಳೇ ಸಮಾಧಾನವೆನಿಸುತ್ತಿತ್ತು. ಗಂಡನನ್ನು ನೋಡಿ ಸರಸಕ್ಕನು ಮನದಲ್ಲಿ—ಇವರು ಇಂದು ಕಚೇರಿಯಿಂದ ಇಷ್ಟು ಬೇಗನೆ ಏಕೆ ಬಂದರು? ನನ್ನ ಸುಖಸ್ವಪ್ನವನ್ನು ನಾಶಮಾಡುವ ಸಲುವಾಗಿಯೇ ಇವರು ಇಷ್ಟು ಬೇಗನೆ ಬಂದಿರಲಿಕ್ಕಿಲ್ಲವಷ್ಟೇ? ಎಂದು ಯೋಚಿಸಿದಳು. ಆದರಿಂದ ಸ್ವಾಭಾವಿಕವಾಗಿಯೇ ಅವಳ ಹಣೆಗೆ ನೀರಿಗೆಗಳು ಬಿದ್ದವು.

ಹೆಂಡತಿಯ ಆಗಿನ ಆ ಮುಖಭಾವವನ್ನು ಕಂಡು ನರಸನಗೌಡನು "ಇಂದು ಇವಳಿಗೇನೋ ಜಡ್ಡು ಆಗಿದೆ. ಅಂತೆಯೇ ಇವಳ ಮುಖಚರ್ಯೆಯು ಹೀಗೆ ತ್ರಸ್ತವಾಗಿರುವದಾಗಿದೆ" ಎಂದು ಮನದಲ್ಲಿಭಾವಿಸಿ—ಯಾಕೆ; ಇಂದು ನಿನಗೆ ಆರಾಮವೆನಿಸುವದಿಲ್ಲವೆ? ಎಂದು ಪ್ರಶ್ನೆ ಮಾಡಿದನು.

ಸರಸಕ್ಕನಿಗೂ ಇಂತಹ ಪ್ರಶ್ನೆಯೇ ಬೇಕಾಗಿತ್ತು. ಆದರಿಂದ ಅವಳು ಮತ್ತಿಷ್ಟು ನರಳುತ್ತ, ಮುಖವನ್ನು ಸೊಟ್ಟು ಸೊಟ್ಟಾಗಿ ಮಾಡುತ್ತ—"ಇಂದು ನನ್ನ ತಲೆಯು ಹೆಚ್ಚಾಗಿ ಹೊಡೆಯುತ್ತಿರುವದರಿಂದ ಮಾತಾಡಲಿಕ್ಕೆ ಕೂಡ ತೊಂದರೆಯಾಗುತ್ತಲಿದೆ" ಎಂದಳು.

"ನಿನಗೆ ಜ್ವರ-ಗಿರ ಬಂದಿದೆಯೇನು?"

"ಅಹುದು. ಮೈಮುರಿದು ಬಂದಂತಾಗಿ ತುಸ ಜ್ವರ ಬಂದಿದೆ."

"ಹಾಗಾದರೆ ಇಂದು ನೀನು ಬಾಟ್ಲಿವಾಲಾನ ಎಗ್ಯೂಮಿಕ್ಶ್ಚರ ತಕ್ಕೊಂಡು ಸ್ವಸ್ಥವಾಗಿ ಬಿದ್ದುಕೊಂಡಿರು. ಇತ್ತೀಚೆಗೆ ಈ ಮುಂಬಯಿ ಪಟ್ಟಣದ ಹವೆಯೇ ಕೆಟ್ಟದೆ."

"ಆದರೆ ತಮ್ಮ ಊಟದ ಸಿದ್ಧತೆ ಮಾಡಬೇಡವೆ?"

"ಊಟದ ಬಗ್ಗೆ ನೀನೇನೂ ತೊಂದರೆಪಡಬೇಡ. ಇಂದು ಆ ಸಮೀಪದ ಕೇಶವಾಶ್ರಮದವನಿಗೆ ಎರಡು ತಾಟುಗಳನ್ನು ಬಡಿಸಿ ಕಳಿಸಲಿಕ್ಕೆ ಟೆಲಿಫೋನಿನಿಂದ ತಿಳಿಸುತ್ತೇನೆ, ಅಂದರಾಯಿತು."

"ಛೀ. ಛೀ. ನಾನಿರಲಿಕ್ಕೆ ಖಾನಾವಳಿಯ ತಾಟುಗಳೇತಕ್ಕೆ? ನಾನೇ ಒಂದು ಅನ್ನ ಹುಳಿಗಳನ್ನು ಮಾಡುತ್ತೇನೆ. ನಿಮಗೆ ಬಡಿಸುತ್ತೇನೆ. ನಿಮ್ಮ ಊಟವಾಗಲಿ. ಅಷ್ಟರಲ್ಲಿ ನನಗೆ ತುಸ ವಿರಾಮವೆನಿಸಿದರೆ ನಾನೂ ನಾಲ್ಕು ತುತ್ತು ತಿನ್ನುತ್ತೇನೆ." ಎಂದವಳೇ ಅಡಿಗೆಯ ಕೋಣೆಯನ್ನು ಹೊಕ್ಕಳು. ಮುಂದೊಂದು ತಾಸಿನಲ್ಲಿ ಪಾಕವು ಸಿದ್ಧವಾಯಿತು. ಅಡಿಗೆಯಾಗುವಷ್ಟರಲ್ಲಿ ನರಸನಗೌಡನೂ ಪೋಷಾಕನ್ನು ಧರಿಸಿ, ಪೇಟೆಗೆ ಹೋಗಿ ಒಂದು ಬಾಟ್ಲಿವಾಲಾನ ಎಗ್ಯೂಮಿಕ್ಶ್ಚರದ ಬಾಟಲಿಯನ್ನೂ, ಮೆಂಥೇಲದ ಸಿಸಾಯಿಯನ್ನೂ ಕೊಂಡು ತಂದನು. ಊಟವಾದೊಡನೆ ಗೌಡನು ಆ ಬಾಟಲಿಯೊಳಗಿನ ಒಂದು ಡೋಜನ್ನು ಸರಸಕ್ಕನಿಗೆ ಕೊಟ್ಟನು. ಅವಳು ತೋರಿದ ವೇಷದ ಪ್ರಾಯಶ್ಚಿತ್ತಕ್ಕಾಗಿ ಆ ಕಟು ಔಷಧಿಯನ್ನು ಮೂಗಿನ ಕೆಳಗಿನ ಹೋರಿನಲ್ಲಿ ಸುರವಿದಳು.

ವಾಚಕರೇ, ನಮ್ಮ ಸರಸಕ್ಕನಿಗೆ ಆಗಿದ್ದ ರೋಗವಾವದು? ಮತ್ತು ಆಕೆಗೆ ಕೊಟ್ಟ ಔಷಧವ್ಯಾವದು? ಆಕೆಗೆ ಉಂಟಾದದ್ದು ಪ್ರೇಮಜ್ವರವು. ಕೊಟ್ಟ ಔಷಧವು ಶೀತಜ್ವರನಿವಾರಕವು. ಬಾಟಲಿವಾಲಾನ ಎಗ್ಯೂಮಿಕ್ಶ್ಚರದಿಂದಲೂ, ಕರ್ಣಿಕನ ಎಗ್ಯೂಮಿಕ್ಶ್ಚರದಿಂದಲೂ ಶೀತಜ್ವರಗಳಾದರೆ ಮಾತ್ರ ನಿವಾರಣವಾದಾವು; ಆದರೆ ಪ್ರೇಮಜ್ವರಕ್ಕೆ ಅವರೊಡನೆ ತನ್ಮಯನಾದ ಅವರ ಪತಿಯೂ ಮತ್ತು ಆತನ ಸಹವಾಸದಿಂದುಂಟಾಗುವ ವಿಲಾಸಗಳೂ ಖಾತ್ರಿಯ ಔಷಧಗಳಾಗಿವೆ. ಆ ತರದ ಜಡ್ಡು ಆದಾಗ ಅವರಿಗೆ ಇಂಥ ಔಷಧದ ಅಗತ್ಯವಿರುತ್ತದೆ. ಎಗ್ಯೂಮಿಕ್ಶ್ಚರದಂಥ ಔಷಧಗಳನ್ನು ಅವರು ಬಯಸುವದಿಲ್ಲ.

ಆದರೆ ಅವರ ಆ ಮನೋಭಾವನೆಯು ದಿನಹೋದ ಅವರ ಪತಿಗೆ ಹೇಗೆ ತಿಳಿಯಬೇಕು? ನರಸನಗೌಡನಿಗೆ ಸರಸಕ್ಕನ ಬೇನೆಯ ನಿದಾನವಾಗದ್ದರಿಂದ, ಅವನು ಯೋಚಿಸಿದ ಔಷಧಿಯಿಂದ ಅವಳಿಗೆ ಸಮಾಧಾನವೆನಿಸುವದೊತ್ತಟ್ಟಿಗೇ ಉಳಿದು, ಮತ್ತಿಷ್ಟು ತಾಪವಾಯಿತು. ಅಂದು ಅವಳ ಮನಸ್ಸಿನಲ್ಲಿ ತನ್ನ ಪತಿಯೊಡನೆ ಪ್ರೊ. ಪರಶುರಾಮಭಾವೂನ ಸರ್ಕಸ್ಸಿಗೆ ಹೋಗುವದಿದ್ದಿತು. ತನ್ನ ಪ್ರಿಯಕರನೊಡನೆ ಒಂದು ರಿಝರ್ವ ಬಾಕ್ಸಿನಲ್ಲಿ ಕುಳಿತು ನಾನಾತರದ ಚೇಷ್ಟೆಯಿಂದಲೂ, ಅಂಗವಿಕ್ಷೇಪಗಳಿಂದಲೂ, ಸುಖಸಲ್ಲಾಪಗಳಿಂದಲೂ ಯುಕ್ತಳಾಗಿ ಅಂದಿನ ಆ ಸರ್ಕಸ್ಸು

ನೋಡಿ ಬರುವದು ಅವಳ ಮನಸ್ಸಿನಲ್ಲಿ ತುಂಬಿತ್ತು. ನರಸನಗೌಡನು ಅವಳ ಆ ಇಚ್ಛೆಯನ್ನು ತಿಳಿದು ಪೂರ್ತಿಗೊಳಿಸಿದ್ದರೆ ಉಭಯತರಿಗೂ ಸ್ವರ್ಗೀಯ ಸೌಖ್ಯವಾಗುತ್ತಿತ್ತು. ಆದರೆ ಆ ಮಬ್ಬು ಗೌಡನಿಗೆ ಅದಾವದೂ ತಿಳಿಯದೆ, ಅವಳಿಗೆ ಜ್ವರದ ಔಷಧವನ್ನು ತಂದು ಕುಡಿಸಿ ಬಿಟ್ಟನು. ಅಂತೇ ಮುಪ್ಪಿನಗಂಡಂದಿರಿಗೆ ಅವರ ತರುಣಹೆಂಡಂದಿರ ಮನೋಭಾವನೆಗಳ ಯಥಾರ್ಥ ಜ್ಞಾನವಾಗುವದಿಲ್ಲೆಂಬ ಲೋಕಾರೂಢಿಯು ದೃಢವಾಗಿದೆ.

ಊಟ ಪಾಟಗಳಾದನಂತರ ಸರಸಕ್ಕನು ಮಲಗಲಿಕ್ಕೆ ಹೋದಳು. ರಾತ್ರಿಯ ತನ್ನ ಕೆಲಸವಾದ ಬಳಿಕ ದಿನಾಲು ಒಂದೆರಡು ವರ್ತಮಾನಪತ್ರಗಳನ್ನಾದರೂ ಅವಳು ಓದದಿರುತ್ತಿರಲಿಲ್ಲ. ಆದರೆ ಇಂದು ಅವಳು ಅವುಗಳ ಕಡೆಗೆ ಇಣಿಕಿ ಕೂಡ ನೋಡದೆ ನೆಟ್ಟಗೆ ಹೋಗಿ ಹಾಸಿಗೆಯ ಮೇಲೆ ಅಡ್ಡಾದಳು. ಅತ್ತಿಂದಿತ್ತ ಎಷ್ಟು ಹೊರಳಾಡಿದರೂ ಅವಳಿಗೆ ನಿದ್ದೆ ಬರಲಿಲ್ಲ. ಅವಳ ಕಣ್ಣೆದುರಿಗೆ ಮತ್ತೆ ಆ ಸರ್ಕಸ್ಸಿನ ಭವ್ಯ ಡೇರೆಯೂ, ಮೃಗಗಳೂ, ಆ ತರುಣಯುವತಿಯೂ ಕಾಣಲಾರಂಭಿಸಿದರು. ನಿದ್ದೆಯಿಂದಾಗಲಿ, ಜ್ವರದ ತಾಪದಿಂದಾಗಲಿ ಅವಳ ಕಣ್ಣುಗಳು ಕೊಂಚವೂ ಮುಚ್ಚಿಕೊಳ್ಳಲಿಲ್ಲ. ಕಣ್ಣುರೆಪ್ಪೆಗಳು ಒಂದೇಸವನೆ ಸಟೆದು ನಿಂತು ಆ ಕಲ್ಪನಾಮಯ ದೃಶ್ಯವನ್ನು ನೋಡಹತ್ತಿದ್ದವು.

ಸರಸಕ್ಕನಿಗೆ ಆ ಇಡೀರಾತ್ರಿಯಲ್ಲಿ ಕಣ್ಣಿಗೆ ಕಣ್ಣು ಹತ್ತಲಿಲ್ಲ. ನರಸನಗೌಡನೂ ಎಚ್ಚತ್ತಿದ್ದು ಹೆಂಡತಿಯನ್ನು ನಾನಾ ಬಗೆಯಾಗಿ ಉಪಚರಿಸುತಲಿದ್ದನು. ಹೆಂಡತಿಗೆ ನಿದ್ದೆ ಹತ್ತಲೆಂದು ಅವನು ಮೊದಲು ಅವಳ ತಲೆಗಿಂಬಿನ ಬಳಿಯಲ್ಲಿ ಕುಳಿತು ಬೀಸಣಿಕೆಯಿಂದ ಗಾಳಿ ಬೀಸಿದನು. ಆದರೂ ನಿದ್ದೆ ಹತ್ತಲಿಲ್ಲ. ನಂತರ ಆಕೆಯ ತಲೆಗೆ ಅಮೃತಾಂಜನವನ್ನು ತಿಕ್ಕಿದನು. ಅದರಿಂದಲೂ ನಿದ್ದೆ ಬರಲಿಲ್ಲ. ಕಡೆಗೆ ಅವಳ ಹಣೆಯ ಮೇಲೆ ಬರ್ಫದ ಚೀಲವನ್ನು ಕೂಡ ಇಟ್ಟನು. ಇಷ್ಟಾದರೂ ಇಷ್ಟಾರ್ಥವು ಕೈಗೂಡಲಿಲ್ಲ.

ನರಸನಗೌಡನ ಸ್ಥಳದಲ್ಲಿ ಯಾವನೊಬ್ಬ ತರುಣ ಗಂಡನಿದ್ದರೆ ಅವನು ತನ್ನ ಹೆಂಡತಿಯ ತಲೆಗೆ ಅಮೃತಾಂಜನ ಮೊದಲಾದವುಗಳನ್ನು ತಿಕ್ಕಿ ಉಪಚರಿಸುವ ಗೊಡವೆಗೆ ಹೋಗದೆ, ಪ್ರಿಯೇ, ನಾವಿಂದು ಆ ಸರ್ಕಸ್ಸಿಗೆ ಹೋಗೋಣ ನಡೆ, ಎಂದಂದು ಅವಳು ತನ್ನ ಕಡೆಗೆ ಓರೆನೋಟದಿಂದ ನೋಡುತ್ತಿರುವಾಗಲೇ ಅವಳೊಡನೆ ಹೋಗಿಬಿಡುತ್ತಿದ್ದನು.

## ಮೂರನೇ ಓರೆನೋಟ.

ನರಸನಗೌಡನಿಂದ ಸರಸಕ್ಕನ ಬೇನೆಯು ನಿದಾನ ಮಾಡುವದಾಗದ್ದ ರಿಂದ ಮುಂದೆ ಎರಡು ಮೂರು ದಿನಗಳವರೆಗೆ ಆಕೆಗೆ ನಿದ್ದೆಯೇ ಬರಲಿಲ್ಲ. ಆ ಅನಿದ್ರಾದೋಷದಿಂದ ನಾಲ್ಕನೇ ದಿವಸ ಆಕೆಗೆ ನಿಜವಾಗಿಯೇ ಜ್ವರ ಬಂದವು. ಮೊದಲೇ ಅವಳಿಗೆ ಆ ದಿನಹೋದ ಗಂಡನಿಂದ ಸುಖವಾಗು ತ್ತಿರಲಿಲ್ಲ; ಆದರಲ್ಲಿ ಈಗ ಬೇನೆಯುಂಟಾದಾಗೆಂತೂ ಅವಳ ಜೀವದ ತಳ ಮಳವು ಹೆಚ್ಚಿತು. ಕೆಲ ದಿನಗಳಮಟ್ಟಿಗೆ ತವರುಮನೆಯುವರಾರನ್ನಾದರೂ ಕರೆಯಿಸಬೇಕೆಂದರೆ, ಅಲ್ಲಿಯೂ ಒಬ್ಬೊಂಟಿಗನಾದ ತಂದೆಯು ಹೊರತು ಅವಳಿಗಾರೂ ಇರಲಿಲ್ಲ.

ಒಂದು ವಾರವಾದರೂ ಸರಸಕ್ಕನ ಜ್ವರವು ನಿಲ್ಲಲಿಲ್ಲ; ಆದರೆ ನರ ಸನಗೌಡನ ಎಗ್ಗ್ಯೊಮಿಕ್‌ಶ್ಚರ ಕೊಡೋಣವು ಮಾತ್ರ ಇನ್ನೂ ನಿಲ್ಲಲೇ ಇಲ್ಲ. ಕಡೆಗೆ ಅವನಿಗೇನೆನಿಸಿತೋ ಯಾರು ಬಲ್ಲರು? ತನ್ನ ಮನೆಯ ಎದುರಿಗಿನ ಮನೆಯಲ್ಲೇ ದವಾಖಾನೆಯನ್ನಿಟ್ಟಿದ್ದ ರಂಗರಾಯ ಡಾಕ್ಟರನನ್ನು ಮನೆಗೆ ಕರೆತಂದು ತನ್ನ ಹೆಂಡತಿಯ ಪ್ರಕೃತಿಯನ್ನು ತೋರಿಸಿದನು. ರಂಗರಾ ಯನು ಇಪ್ಪತ್ತೈದು ವರ್ಷದ ಹರೆಯದವನು. ಅದರಿಂದ ಅವನು ನರ ಸನಗೌಡನಂತೆ ತನ್ನ ಮೀಸೆ-ಗಡ್ಡಗಳಿಗೆ ಕಲಪನ್ನು ಹಚ್ಚುತ್ತಿದ್ದಿಲ್ಲ; ಹಾಗು ತನ್ನ ಕೂದಲುಗಳಮೇಲೆ ಸದಾ ಸರ್ವದಾ ಕಾಮಿನಿಯಾ ಮುಂತಾದ ಎಣ್ಣೆಗಳನ್ನು ಸುರುವುತ್ತಿರಲಿಲ್ಲ. ಆತನು ಹುರಿಕಟ್ಟಿನ ಮೀಸೆಯುವನಾಗಿ ದ್ದನು. ತಾರುಣ್ಯದ ಸೌಗಂಧದ ಮೂಲಕ ಆತನ ಅಚ್ಚುಕಪ್ಪಾದ ಕೂದ ಲುಗಳು ಎಣ್ಣೆ ಹಚ್ಚಿ ಬಾಚಿದಂತೆ ನುಣುಪಾಗಿ ತೋರುತಲಿದ್ದವು. ಆತನ ದುಂಡನ್ನ ಮುಖಮಂಡಲವು ಮೋಹಕವಾಗಿದ್ದಿತು. ಮೈಬಣ್ಣವು ಹೊಂಬ ಣ್ಣವನ್ನು ಹೋಲುತ್ತಿತ್ತು. ಅವನ ದೃಷ್ಟಿಯುಮಿಂಚು ವಜ್ರದ ಪೊಳ ಪನ್ನು ಹಿಂದೂಡುವಂತಿತ್ತು. ಆ ರಂಗರಾಯನು ತನ್ನ ಕೈಚೀಲವನ್ನು ತಕ್ಕೊಂಡು ಬಂದು ನರಸನಗೌಡನ ಮನೆಯೊಳಗಿನ ಒಂದು ಕುರ್ಚಿಯ ಮೇಲೆ ವಿರಾಜಿಸಿದನು. ಅವನ ಮುಖಮಂಡಲವು ಕಣ್ಣಿಗೆ ಬಿದ್ದೊಡ ನೆಯೇ ಸರಸಕ್ಕನ ಅರ್ಧ ಜಡ್ಡು ಹೊರಟುಹೋಯಿತು. ಡಾಕ್ಟರನು

ನಾಡಿ ನೋಡುವದಕ್ಕಾಗಿ ಅವಳ ಕೈಹಿಡಿದಾಗೆಂತೂ ಅವಳ ನಾಡಿಗಳು ಒಳ್ಳೇ ಒತ್ತರದಿಂದ ಹರಿಯಹತ್ತಿದವು.

ನಾಡಿ ನೋಡುವದಾದ ಬಳಿಕ ಆ ಚತುರ ಡಾಕ್ಟರನು ಒಮ್ಮೆ ನರಸನಗೌಡನ ಮುಖವನ್ನೂ ಮತ್ತೊಮ್ಮೆ ಸರಸಕ್ಕನ ಮುಖವನ್ನೂ ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸಿದನು; ಹಾಗು ತತ್‌ಕ್ಷಣವೇ ಅವಳಿಗಾದ ರೋಗವನ್ನು ಕಂಡು ಹಿಡಿದನು. ಹೆಂಡತಿಯ ಬೇನೆಯ ನಿದಾನವನ್ನು ಗಂಡನ ಮೋರೆಯ ಲಕ್ಷಣದಿಂದ ತಿಳಿಯುವ ಆ ಹೊಸ ಪದ್ಧತಿಯನ್ನು ಆ ಡಾಕ್ಟರನು ಎಲ್ಲಿಂದ ಕಲಿತು ಬಂದಿದ್ದನೋ ಯಾರಿಗೆ ಗೊತ್ತು? ಅದು ಮುಖಲಕ್ಷಣಶಾಸ್ತ್ರದಲ್ಲಿ ಹೇಳಿದೆಯೋ ಅಥವಾ ವಿಲಾಯತಿಯ ವಿಶ್ವವಿದ್ಯಾಲಯಗಳಲ್ಲಿ ಕಲಿಸಲ್ಪಡುವದೋ ತರ್ಕಿಸಲಸಾಧ್ಯವು.

ಸರಸಕ್ಕನ ಪ್ರಕೃತಿಯನ್ನು ನೋಡಿ ರಂಗರಾಯ ಡಾಕ್ಟರನು ಔಷಧದ ಪಟ್ಟಿಯನ್ನು ಬರೆದು ತಯಾರಿಸಿದನು. ಅವನ ಆ ಯಾದಿಯಲ್ಲಿ ಮಾಮೂಲಿಯ ಔಷಧಗಳ ಹೊರತು ಹೆಚ್ಚಿನ ಜೀನಸುಗಳೇನೂ ಇರಲಿಲ್ಲ. ಆದರೆ ಅವನ್ನು ಬರೆಯುವಾಗ ಮಾತ್ರ ಆತನು ಒಳ್ಳೇ ಕುಶಲತನವನ್ನು ಪಯೋಗಿಸಿ ಬಳಕೆಯಲ್ಲಿಲ್ಲದ ಗೆಡಚು ಹೆಸರುಗಳನ್ನು ಬರೆದಿದ್ದನು. ಎಷ್ಟೋ ಜನ ವಿಶಿಷ್ಟ ಹುಷಾರ ಜನರಿಗೆ ಡಾಕ್ಟರ-ವೈದ್ಯರ ಔಷಧದ ಪಟ್ಟಿಯನ್ನು ಓದಿನೋಡುವ ದುಷ್ಟಚಟವಿರುತ್ತದೆ. ಔಷಧದ ಪಟ್ಟಿಯಲ್ಲಿ ಅಪರಿಚಿತ ಹೆಸರುಗಳುಇದ್ದರೇ ಅವರಿಗೆ ಆ ಡಾಕ್ಟರನ ಡಾಕ್ಟರಿಕೆಯಬಗ್ಗೆ ವಿಶ್ವಾಸವುಂಟಾಗುವದು. ಅವನ ಯಾದಿಯಲ್ಲಿ ಹಲಕೆಲವು ಪರಿಚಿತ ಔಷಧಗಳ ನಾಮನಿರ್ದೇಶವಾದರೆ ಸಾಕು, ಆ ಡಾಕ್ಟರನನ್ನು ಅವರು ಕ್ಷುಪದಾರ್ಥವೆಂದೇ ಭಾವಿಸುತ್ತಿರುತ್ತಾರೆ. ರೋಗಿಗಳ ಅಥವಾ ಅವರ ಹಿತಚಿಂತಕರ ಆ ದುಶ್ಚಟದ ಅನುಭವವನ್ನು ಹೊಂದಿ ಹುಷಾರಿಯಾಗಿದ್ದ ಆ ರಂಗರಾಯ ಡಾಕ್ಟರನು ಸರಸಕ್ಕನಿಗಾಗಿ ಬರೆದಿಟ್ಟ ತನ್ನ ಔಷಧಿಗಳ ಯಾದಿಯಲ್ಲಿ ಆ ಬಗ್ಗೆ ಎಚ್ಚರಪಟ್ಟಿದ್ದನು. ವೈದ್ಯಶಾಸ್ತ್ರದಲ್ಲಾದರೂ ಔಷಧಿಗಳ ಹೆಸರುದೆಸೆಗಳನ್ನು ರೋಗಿಯ ಎದುರಿಗೆ ಸರ್ವಥಾ ಉಚ್ಚಾರ ಮಾಡಬಾರದೆಂದು ನಿರ್ಬಂಧಿಸಲ್ಪಟ್ಟಿದೆ, ಇರಲಿ.

ರಂಗರಾಯರ ಔಷಧದಿಂದ ಸರಸಕ್ಕನಿಗೆ ಬಹುಬೇಗನೆ ಗುಣವಾಯಿತು: ಆದರೆ ಅವಳಿಗೆ ಗುಣವಾದದ್ದು ಕೇವಲ ಅವರ ಔಷಧದಿಂದಲೇ

ಎಂದು ಹೇಳುವದಕ್ಕಿಂತ, ಅವನು ಆಗಾಗ್ಗೆ ನರಸನಗೌಡನ ಮನೆಗೆ ಬರ ಹೋಗಹತ್ತಿದ್ದರಿಂದಲೇ ಗುಣವಾಯಿತೆಂದು ಧಾರಾಳವಾಗಿ ಅನ್ನಬಹುದು. ಡಾಕ್ಟರರು ಮನೆಗೆ ಬಂದ ಕೂಡಲೆ ಸರಸಕ್ಕನಿಗೆ ಹುಷಾರಿಯೆನಿಸಹತ್ತುವದು, ಮತ್ತು ಅವರು ಪುನಃ ಪುನಃ ತಮಲ್ಲಿಗೆ ಬರಬೇಕೆಂಬ ಮನೀಷೆಯಿಂದ ಆ ಬೇನೆಯು ಮತ್ತೆ ಮತ್ತೆ ಅವಳಲ್ಲಿ ಪ್ರಾದುರ್ಭವಿಸುವದು. ಈ ಡಾಕ್ಟರನ ಔಷಧೋಪಚಾರದಿಂದ ಸಂಪೂರ್ಣವಾಗಿ ಗುಣವಾಯಿತೆಂದು ಹೇಳಿದರೆ, ತನ್ನ ಗಂಡನು ನಾಳಿನಿಂದ ಇವನನ್ನು ಎಲ್ಲಿ ಮನೆಗೆ ಕರೆತರದಾಗುವನೋ ಎಂಬ, ಒಂದುವೇಳೆ ಇವನಿಂದ ತನ್ನ ಬೇನೆಯು ಗುಣವಾಗದೆಂದು ಹೇಳಿದರೆ ತನ್ನ ಗಂಡನು ಈ ಡಾಕ್ಟರನನ್ನು ಬಿಟ್ಟು ಮತ್ತಾವ ಡಾಕ್ಟರರನ್ನು ಕರೆತರುವನೋ ಎಂಬ ಹೀಗೆ ಇತ್ತಂಡ ಯೋಚನೆಯಲ್ಲಿ ಸರಸಕ್ಕನು ಮಗ್ನಳಾಗಿದ್ದಳು. ಸರಸಕ್ಕನಿಗೆ ಯೌವನಸಂಪನ್ನ ರಂಗರಾಯ ಡಾಕ್ಟರನ ಔಷಧವೇ ರುಚಿಸುತ್ತಿತ್ತಲ್ಲದೆ ಬೇರೆ ಯಾವನೊಬ್ಬ ವೃದ್ಧಕಪಿಯ ನೆಳಲುಕೂಡ ಅವಳಿಗೆ ಅಸಹ್ಯವೆನಿಸುತ್ತಿತ್ತು. ಅಂತೇ ರಂಗರಾಯಡಾಕ್ಟರರು ಮನೆಗೆ ಬಂದಾಗೆಲ್ಲ ಅವಳ ಬೇನೆಯ ವಿಕಾರವು ಕಡಿಮೆಯಾಗಿಯೂ, ಪುನಃ ಅವರು ತಮ್ಮಲ್ಲಿಗೆ ಬರಬೇಕೆಂಬ ಆಶೆಯಿಂದ ಅವಳಲ್ಲಿ ಅದು ಮನೆಮಾಡಿಕೊಂಡೂ ಇದ್ದಿತು.

ಕುಶಲ ರಂಗರಾಯಡಾಕ್ಟರನು ಸರಸಕ್ಕನ ಬೇನೆಯ ಮಟ್ಟನ್ನು ಮೊದಲಿನಿಂದಲೇ ಗೊತ್ತು ಹಿಡಿದಿದ್ದನು. ಆತನು ತರುಣನಿದ್ದದರಿಂದಲೇ ಅವನಿಗೆ ಆ ನವತರುಣಿಯ-ನರಸನಗೌಡನ ಎರಡನೇ ಹೆಂಡತಿಯ-ಬೇನೆಯ ಕಾರಣವು ಚೆನ್ನಾಗಿ ಗೊತ್ತಾಗಿತ್ತು. ತರುಣರ ಮನೋಭಾವವು ತರುಣರಿಗೇ ಹೊಳೆಯುವದು; ಅಲ್ಲದೆ ದಿನಹೋದವರಿಗೆ ಅದರ ಮರ್ಮವು ಹೇಗೆ ಹೊಳೆಯಬೇಕು? ತರುಣರಂಗರಾಯನ ಹೊರತು ಯಾವನೊಬ್ಬ ವೃದ್ಧ ಕಪೀಶ್ವರ ಡಾಕ್ಟರನು ಸರಸಕ್ಕನ ಪ್ರಕೃತಿಯನ್ನು ನೋಡಹೋಗಿದ್ದರೆ ಅವನಿಗೆ ಅವಳ ನಿಜವಾದ ಬೇನೆಯ ಗಂಧವು ಕೂಡ ತಿಳಿಯುತ್ತಿದ್ದಿಲ್ಲ. ಇಷ್ಟೇ ಅಲ್ಲ, ಅವನು ವೈದ್ಯಶಾಸ್ತ್ರದೊಳಗಿನ ಯಾವದೊಂದು ಅಗಡಬಂಬವಾದ ಹೆಸರನ್ನು ಅವಳ ರೋಗಕ್ಕೆ ಇಟ್ಟು ಔಷಧಕೊಡಹತ್ತುತ್ತಿದ್ದನು. ಆತನ ಆ ಔಷಧದಿಂದ ಸರಸಕ್ಕನಿಗೆ ಗುಣವಾಗುವ ಬಗೆ ಹೇಗೆ?

ಇಲ್ಲಿ ನಮ್ಮ ವಾಚಕರಿಗೆ ತಿಳಿಸತಕ್ಕ ಮಹತ್ವದ ಸಂಗತಿಯಿಷ್ಟೇ!

ಸರಸಕ್ಕನ ಆಗಿನ ಆ ಬೇನೆಯು ನೆವದಿಂದಲೇ ನರಸನಗೌಡನಿಗೂ ರಂಗೆ ನಾಥಡಾಕ್ಟರರಿಗೂ ಋಣಾನುಬಂಧುತ್ವವುಂಟಾಯಿತು. ಮೊದಮೊದಲು ರಂಗನಾಥಡಾಕ್ಟರರನ್ನು ತಮ್ಮ ಮನೆಗೆ ಕರಿಸಬೇಕಾದರೆ ನರಸನಗೌಡನು ಫೀ ಕೊಡಬೇಕಾಗುತ್ತಿತ್ತು. ಆದರೆ ಬರಬರುತ್ತ ಡಾಕ್ಟರರು ಫೀಯ ಆಶೆಯನ್ನು ತೊರೆದು ಕರೆದಾಗೆಲ್ಲ ಅವರ ಮನೆಗೆ ಬರಹತ್ತಿದರು. ಇತ್ತೀ ಚೆಗೆ ಡಾಕ್ಟರರು ನರಸನಗೌಡರ ಮನೆಗೆ ಚಹಾಕ್ಕೆ ಕೂಡ ಬರುತ್ತಿದ್ದರು. "ಇರಾಣೀ ಹಾಟೇಲಕ್ಕಿಂತ ನಮ್ಮ ಸರಸಕ್ಕನ ಕೈಯ ಚಹಾವೇ ಹೆಚ್ಚು ಮಿಷ್ಟವಾಗುತ್ತದೆ"ಂದು ಡಾಕ್ಟರರು ಅನ್ನುತ್ತಿದ್ದರು. ನರಸನಗೌಡನು ಅಷ್ಟೊಂದು ಉದಾರಿಯಲ್ಲೆಂಬದನ್ನು ನಮ್ಮ ವಾಚಕರಿಗೆ ಮತ್ತೆ ಮತ್ತೆ ಹೇಳುವಕಾರಣವಿಲ್ಲ. ಆತನ ಸ್ನೇಹಿತರು ಅವನ ಮನೆಯಲ್ಲಿಂದೂ ಚಿತ್ರಾ ನತಿಯನ್ನು ಹಾಕಿದ್ದಿಲ್ಲ. ತನ್ನ ಗೆಳೆಯರೊಡನೆ ಮಾತುಕಥೆಗಳ ಮಟ್ಟಿಗೆ ಮಾತ್ರ ಗೆಳೆತನವನ್ನಿಟ್ಟುಕೊಂಡಿದ್ದ ಆ ಕಂಜೂಷ ಗೌಡನು ಯಾವಜನ್ಮದ ಉದಾರತನದ ಸಿಲಕಿನಿಂದಲೋ ಏನೋ ಡಾಕ್ಟರನಿಗೆ ಮಾತ್ರ ಆಗಾಗ್ಗೆ ಚಹ-ಫರಾಳಗಳಿಗೆ ಕರೆಯುಹತ್ತಿದ್ದನು.

ನರಸನಗೌಡನ ಆ ಕಡತಂದ ಉದಾರತನಕ್ಕೆ ಮತ್ತೊಂದು ವಿಶೇಷ ಪ್ರಕಾರದ ಕಾರಣವಿದ್ದಿತು. ಡಾಕ್ಟರನು ಮನೆಗೆ ಆಗಾಗ್ಗೆ ಬರಹೋಗು ವದರಿಂದ ಅವನ ದ್ವಿತೀಯ ಭಾರ್ಯೆಯಾದ ಸರಸಕ್ಕನಿಗೆ ಆನಂದವಾಗು ತ್ತಿತ್ತು. ಅವಳ ಆನಂದಮಯ ಸ್ಥಿತಿಯಿಂದ ಇವನಿಗೂ ಆನಂದವಾಗು ತ್ತಿತ್ತು. ಆದರಿಂದಲೇ ಅವನು ಆ ಡಾಕ್ಟರನ ವಿಷಯದಲ್ಲಿ ತನ್ನ ಸ್ವಭಾವ ಸಿದ್ಧವಾದ ಜೀನತನಕ್ಕೆ ತಡೆಹಾಕುತ್ತಿದ್ದನು. ಬರಬರುತ್ತ ಡಾಕ್ಟರನ ಸಲಿಗೆಯು ಆ ಮನೆಯವರಿಗೆ ಹೆಚ್ಚಿತು. ಒಂದೊಂದು ವೇಳೆ ಡಾಕ್ಟರನು ಸರಸಕ್ಕನ ಮನೆಗೆ ಬಂದ ಎಷ್ಟೋ ನಿಮಿಷಗಳನಂತರ ನರಸನಗೌಡನು ತನ್ನ ಆಫೀಸಿನಿಂದ ಬರುತ್ತಿದ್ದನು. ಅಂಥ ಪ್ರಸಂಗಗಳಲ್ಲಿ ಮೊದಮೊದಲು ಡಾಕ್ಟರನು ಸರಸಕ್ಕನ ಕ್ಷಮೆಬೇಡಿ ಹೊರಡಲು ಸಿದ್ಧನಾಗುತ್ತಿದ್ದನು; ಆದರೆ ಆಕೆಯು—"ಅವರು ಮನೆಯಲ್ಲಿರದಿದ್ದರೆ ಏನಾಯಿತು? ತುಸ ಹೊತ್ತು ಕೂಡ್ರಿರಿ. ಇಗೋ, ನಾನು ಚಹಕ್ಕೆ ಇಡುವೆನು. ಅಷ್ಟರಲ್ಲಿ ಅವರೂ ಬಂದರೆ ಮೂವರೂ ತಕ್ಕೊಳ್ಳೋಣ. ಇಲ್ಲದಿದ್ದರೆ ನಾವಿಬ್ಬರೇ ಕುಡಿದು, ಅವರು ಬಂದನಂತರ ಅವರಿಗಾಗಿ ಪುನಃ ಮಾಡೋಣವಂತೆ,"

ಎಂದು ಹೇಳಿ ಕೊಡ್ಚಲಿಕ್ಕೆ ಒತ್ತಾಯ ಮಾಡುತ್ತಿದ್ದಳು. ಮನೆಯ ತರುಣ ಯಜಮಾನತಿಯೇ ಈ ಪ್ರಕಾರ ಆದರದಿಂದ ಹೇಳುತ್ತಿರಲಿಕ್ಕೆ ಅದಾವ ತರುಣ ಪುರುಷನು ನಿರ್ಭಿಡೆಯಿಂದ ಅಲ್ಲಿಂದ ಹೊರಟುಹೋದಾನು? ಯಾವನೊಬ್ಬನು ಹಾಗೆ ಹೊರಟುಹೋದರೆ ಆತನು ಸರ್ವಸಂಗ ಪರಿತ್ಯಾಗಿಯಾದ ಮುಕ್ತನಾದರೂ ಇರಬೇಕು; ಇಲ್ಲವೆ ಅರಸಿಕನಾದ ಷಂಡನಾದರೂ ಇರಬೇಕು.

ನರಸನಗೌಡನು ಮನೆಯಲ್ಲಿಲ್ಲದಾಗ ಅವರ ಮನೆಯಲ್ಲಿ ಕಾಲಿಡಲಿಕ್ಕಿಲ್ಲೆಂದು ಡಾಕ್ಟರ ರಂಗರಾಯನು ಮೊಡಮೊದಲು ಎಷ್ಟೋ ಸಾರೆ ತನ್ನ ಮನಸ್ಸಿನಲ್ಲಿಯೇ ದೃಢಸಂಕಲ್ಪ ಮಾಡುತ್ತಿದ್ದನು; ಆದರೆ ಏನಾದರೊಂದು ನೆವಸಿಕ್ಕಕೂಡಲೆ ಆತನ ಕಾಲುಗಳು ಆತನ ಮನಸ್ಸಿನ ಹುಕುಮಿನ ವಿರುದ್ಧವಾಗಿ ಸಾಗಿ ಸರಸಕ್ಕನ ಮುಂದೆ ಅವನನ್ನು ತಂದು ನಿಲ್ಲಿಸುತ್ತಿದ್ದವು. ಆಗೆ ನರಸನಗೌಡನು ಮನೆಯಲ್ಲಿದ್ದರೆ ಡಾಕ್ಟರನಿಗೆ ಖೇದವೆನಿಸುತ್ತಿದ್ದಿಲ್ಲ; ಆದರೆ ಗೌಡನು ಇರದಿದ್ದರೆ ಮಾತ್ರ ಅವನ ಮನಸ್ಸು ಅವನನ್ನೇ ತಿನ್ನುತ್ತಿತ್ತು. ಮೇಲೆ ಹೇಳಿದಂತೆ ಅವನು ಎಷ್ಟೋ ಸಾರೆ ಸಂಕಲ್ಪಿಸಿದ್ದನು; ಮತ್ತು ಮರುವಿನ ಆ ಸಂಕಲ್ಪ ಮುರಿದು ಗೌಡನ ಮನೆಗೆ ಹೋಗಿದ್ದನು. ಮನುಷ್ಯನ ಕೆಲವು ತಪ್ಪುಗಳು ಬಹು ಸೋಜಿಗದಿಂದಾಗುತ್ತಿರುತ್ತವೆ. ಆ ತಪ್ಪುಗಳು ಒಮ್ಮೆ ಆಗಹತ್ತಿದವೆಂದರೆ ಪುನಃ ಪುನಃ ಆಗಹತ್ತುತ್ತವೆ. ಬರಬರುತ್ತ ಆ ತಪ್ಪುಗಳು ನಿಯಮಿತವಾಗಿ ಆಗಲಾರಂಭಿಸುವವು. ಗಂಡನು ಮನೆಯಲ್ಲಿಲ್ಲದ ತರುಣ ಸ್ತ್ರೀಯ, ಅದರಲ್ಲೂ ಚೆಲುವೆಯಾದ ಯುವತಿಯ ಮನೆಗೆ ಹೋಗುವವನ ತಪ್ಪಾದರೂ ಇದೇ ವರ್ಗದ್ದು. ಆ ಸ್ತ್ರೀಯು ತುಸ ಸುಮ್ಮನೆ ಇದ್ದರೆ ಸಾಕು, ಆ ಪರಪುರುಷನ ಆ ತಪ್ಪು ಕ್ರಮ ಕ್ರಮವಾಗಿ ಬೆಳೆಯಹತ್ತುತ್ತದೆ. ಸಾವಿರಾರು ಸಾರೆ ಅವನು ಆ ಬಗ್ಗೆ ಮನಸ್ಸಿನಲ್ಲಿ ಪಶ್ಚಾತ್ತಾಪಪಟ್ಟರೂ ಮತ್ತು ಆತನಿಂದ ಆ ತಪ್ಪು ಆಗತಕ್ಕದ್ದೇ?

ನರಸನಗೌಡನಿಗೆ ರಂಗನಾಥರಾಯರ ಈ ತಪ್ಪು-ವರ್ತನವು ಮೈಗೆ ಸಹಸ್ರಚೇಳುಗಳು ಒಮ್ಮೆಲೆ ಕಚ್ಚಿದಷ್ಟು ವೇದನೆಯನ್ನುಂಟುಮಾಡುತ್ತಿತ್ತು; ಆದರೆ ತನ್ನ ತರುಣ ಸುಂದರ ದ್ವಿತೀಯ ಪತ್ನಿಯ ಮನಸ್ಸು ಮುರಿಯಲಿಕ್ಕೆ ಅಂಜುತ್ತಿದ್ದ ಆ ಗೌಡನು ಮನಸ್ಸಿನಲ್ಲಿಯೇ ಲಟಕುಮುಂ

ಯುತ್ತಿದ್ದು, ಡಾಕ್ಟರರು ಸಮ್ಮುಖದಲ್ಲಿದ್ದಾಗೆಲ್ಲ "ಹ, ಹ, ಹ," ಎಂದು ಔಪಚಾರಿಕವಾಗಿ ನಗುತ್ತ ಕಾಲಹರಣ ಮಾಡುತ್ತಿದ್ದನು. ನರಸನಗೌಡನಂತಹ ಎಷ್ಟೋ ದಿನಹೋದ ಕೈಲಾಗದ ದ್ವಿತೀಯ ಪತ್ನಿಯ ಪತಿಯರು ಹೀಗೆಯೇ ದಿನಹಾಕುತ್ತಿರಬಹುದಲ್ಲವೇ? ವಾಚಕರೇ ಅವರಲ್ಲಿಯೂ ಪ್ರಕೃತಿಮಾನ, ಸ್ವಭಾವಭೇದ, ಸಂಸ್ಕೃತಿ ಪರಿಣಾಮಗಳಂತೆ ಬೇರೆ ಬೇರೆ ತರಗತಿಯ ಜನರಿರುತ್ತಾರೆ. ಕೆಲವು ಜನ ವೃದ್ಧಪತಿಗಳು ನರಸನಗೌಡನಂತೆ ತಮ್ಮ ದ್ವಿತೀಯ ಕುಟುಂಬದ ಮನಸ್ಸನ್ನೊಲಿಸಿಕೊಳ್ಳುವದಕ್ಕಾಗಿ ಅವಳು ನಡೆದಂತೆ ನಡೆಯಲೆಂದು ಸುಮ್ಮನಿದ್ದರೆ, ಬೇರೆ ಕೆಲವು ಕೈಲಾಗದ ಹೇಡಿಗಳು ತಮ್ಮ ತರುಣ ದ್ವಿತೀಯ ಪತ್ನಿಯು ಪರಪುರುಷನೊಡನೆ ಗುಲುಗುಲು ಮಾಡುವಳೆಂಬ ನೆವದಿಂದ ಅವಳನ್ನಾಗಲಿ, ಆ ಪರಪುರುಷನನ್ನಾಗಲಿ ಇಲ್ಲವೆ ಅವರೀರ್ವರನ್ನೂ ಕೂಡಿಯೇ ಆಗಲಿ ಯಾವದೊಂದು ಬಗೆಯಿಂದ ಯಮಸದನಕ್ಕಟ್ಟುವ ಹೊಂಚುಹಾಕಿ, ತಮ್ಮ ಮನೆತನದ ಕೀರ್ತಿಗೆ ಕಲಂಕವನ್ನು ಹಚ್ಚಿ, ದ್ವಿತೀಯ ಪತ್ನಿಯರ ಗಂಡಂದಿರೆಂಬ ದುರ್ನಾಮವು ಪ್ರಸಿದ್ಧವಾಗುವಂತೆ ಏರ್ಪಾಟು ಮಾಡುತ್ತಾರೆ. ಇನ್ನೂ ಕೆಲವರು ದಕ್ಷಿಣ ದೇಶದವರು ತಮ್ಮ ಚೆಲುವೆಯರಾದ ತರುಣ ಪತ್ನಿಯರ ಸಹಾಯದಿಂದ ತಮ್ಮ ದ್ರವ್ಯಲಾಲಸೆಯನ್ನೂ, ನೌಕರಿ-ಅಧಿಕಾರಗಳ ಕೊರತೆಯನ್ನೂ ಪೂರೈಸಿಕೊಳ್ಳುತ್ತಿರುವರೆಂಬ ಜನವಾರ್ತೆಯಿದೆ. ಅದು ಎಷ್ಟರಮಟ್ಟಿಗೆ ನಿಜವೋ ದೇವರೇ ಬಲ್ಲ!

ಒಮ್ಮೆ ರಂಗನಾಥರಾಯನು ನರಸನಗೌಡನಿಲ್ಲದಾಗ ಅವನ ಮನೆಗೆ ಹೋಗಿ ಸರಸಕ್ಕನು ಮಾಡಿಕೊಟ್ಟ ಚಹಾ ಕುಡಿಯುತ್ತ ಕುಳಿತಾಗ ಓಣಿಯಲ್ಲಿ ಹಚ್ಚಿದ್ದ ಒಂದು ನಾಟಕದ ವಾಲ್‌ಬಿಲ್ಲು ಅವನ ಮನಸ್ಸನ್ನು ವೇಧಿಸಿತು. ಅವನು ಆ ಜಾಹೀರಾತನ್ನು ಓದಿದವನೇ ಸರಸಕ್ಕನನ್ನು ಕುರಿತು—ಅತ್ತಿಗೀ, ಇಂದು ಬಾಲಗಂಧರ್ವನ **ವಿಷಮವಿವಾಹ** ನಾಟಕವಿರುತ್ತದಂತೆ. ನೀವು ಅದನ್ನು ಎಂದಾದರೂ ನೋಡಿರುವಿರಾ? ಎಂದು ಮುಗುಳು ನಗೆಯಿಂದ ಪ್ರಶ್ನಮಾಡಿದನು.

ಸರಸಕ್ಕ:—ಡಾಕ್ಟರರೇ, ನಾನು ಇಲ್ಲಿಗೆ ಬಂದಂದಿನಿಂದ ಒಂದೂ ನಾಟಕವನ್ನು ನೋಡಿಲ್ಲ. ನಮ್ಮ ಮನೆಯವರಿಗೆ ಯಾವ ಖುಷಿಮೋಜುಗಳೂ ಸೇರುವದಿಲ್ಲ. ಆದರಿಂದ ಅವರು ಯಾವ ನಾಟಕಕ್ಕಾಗಲಿ, ಸಿನೇಮಾ-

ಸರ್ಕಸ್ಸುಗಳಿಗಾಗಲಿ ಹೋಗುವದಿಲ್ಲ. ಇಷ್ಟೇ ಅಲ್ಲ; ನಾಟಕ ಕಾದಂಬರಿ ಮುಂತಾದ ಲಲಿತ ವಾಙ್ಮಯದಕಡೆಗೆ ಅವರು ಹಣಿಕಿ ಸಹ ಹಾಕುವದಿಲ್ಲ.

ಡಾಕ್ಟರ:—ಆಶ್ಚರ್ಯ-ಮಹದಾಶ್ಚರ್ಯವೆನ್ನಬೇಕಿದಕ್ಕೆ. ಈ ಮುಂಬಯಿ ಪಟ್ಟಣದಲ್ಲಿದ್ದು ಬಾಲಗಂಧರ್ವನ ಒಂದೂ ನಾಟಕ ನೋಡದಿರುವದು ಕಡು ಸೋಜಿಗದ ಸಂಗತಿಯೇ ಸರಿ!

ಸರಸಕ್ಕ:—ಡಾಕ್ಟರರೇ, ನಮ್ಮದೂ ಒಂದು ನಾಟಕವೇ ಇರುತ್ತದೆ. ಗಂಧರ್ವನಾಟಕ ಮಂಡಳಿಯು ತನ್ನ ನಾಟಕಗಳನ್ನು ಹೇಗೆ ಜನರಿಗೆ ತೋರಿಸುವದೋ ಹಾಗೆ ನಮ್ಮ ನಾಟಕವನ್ನೂ ತೋರಿಸಿದರೆ ನಮಗೂ ದುಡ್ಡು ದೊರೆಯಬಹುದಲ್ಲವೇ?

ಡಾಕ್ಟರ:—ಅದಿರಲಿ ಬಿಡಿರಿ. ಅತಿಗೀ, ಇಂದು ನಾವು ಬಾಲಗಂಧರ್ವನ ನಾಟಕಕ್ಕೆ ಹೋಗೋಣ. ಗಂಧರ್ವನು ಆ ನಾಟಕದ ೩ನೇ ಅಂಕಿನಲ್ಲಿಯ ಭೂಮಿಕೆಯನ್ನು ಒಳ್ಳೇ ಸೊಗಸಾಗಿ ಮಾಡುತ್ತಾನಂತೆ. ಅವನ ಆ ಪಾತ್ರವನ್ನು ನೋಡಿ ಪ್ರೇಕ್ಷಕರಿಗೆ ಹುಚ್ಚೇ ಹಿಡಿಯುತ್ತದೆ.

ಸರಸಕ್ಕ:—ಡಾಕ್ಟರರೇ, ನನ್ನ ಹಣೇಬರಹದಲ್ಲಿ ಹಾಗೆಲ್ಲಿ ಬರೆದದೆ? ಅವರೆದುರಿಗೆ ನಾಟಕದ ಹೆಸರು ಕೂಡ ತೆಗೆಯುವದು ಕಠಿಣವು. ದಣಿದು ಬಂದ ಅವರೆದುರಿಗೆ ಆ ತರದ ಮಾತು ತೆಗೆಯುವ ಬಗೆ ಹೇಗೆ?

ಡಾಕ್ಟರ:—ನಾಳೆ ರವಿವಾರವಿದೆ. ಗೌಡರಿಗೆ ಹೇಗೂ ಸೂಟಿಯು. ಮೇಲಾಗಿ ನಾಳೆ ಮಧ್ಯಾಹ್ನವೇ ನಾಟಕದ ಪ್ರಯೋಗವಾಗುವದು. ನಾಳೆ ಎಲ್ಲ ಕಚೇರಿಗಳಿಗೂ ಸೂಟಿಯಿರುವದರಿಂದ ಪ್ರೇಕ್ಷಕರ ದಟ್ಟಣೆಯು ಹೆಚ್ಚುವದು.

ಸರಸಕ್ಕ:—ಛೀ-ಛೀ, ಅವರೆಂದೂ ನಾಟಕಕ್ಕೆ ಬರುವದಿಲ್ಲ. ಇದು ನಿರ್ಧಾರದ ಮಾತೇ ಎಂದು ತಿಳಿಯಿರಿ.

"ಹಾಗಾದರೆ ಅತಿಗೀ ................" ಎಂದವನೇ, ಡಾಕ್ಟರನು ತನ್ನ ನಾಲಿಗೆಯನ್ನು ಬಿಗಿಹಿಡಿದನು.

"ಯಾಕೆ? ನೀವು ನಿಮ್ಮ ಅಭಿಪ್ರಾಯವನ್ನು ತಿಳಿಸಲಿಕ್ಕೆ ಅನುಮಾನವನ್ನೇಕೆ ಮಾಡುತ್ತೀರಿ?"

ಡಾಕ್ಟರನು ಎಷ್ಟೋ ಹೊತ್ತು ಆಲೋಚಿಸಿ, ಏನು ಮಾತಾಡಬೇಕೆಂಬುದನ್ನು ಮನಸ್ಸಿನಲ್ಲಿ ನಾಲ್ಕು ನಾಲ್ಕು ಸಾರೆ ನಿರ್ಧರಿಸಿಕೊಂಡು ಕಡೆಗೆ

"ಅತಿಗೀ, ನಾನು ಹೀಗೆನ್ನುತ್ತೇನೆ; ಗೌಡರುಬರುವಂತಿರದಿದ್ದರೆ ನಾವೇ ನಾಳೆ ಮಧ್ಯಾಹ್ನ ನಾಟಕಕ್ಕೆ ಹೋಗಿ ಬರೋಣ. ಹೇಗೂ ಅವರು ಸೂಟಿಯ ದಿವಸ ಮಧ್ಯಾಹ್ನದಲ್ಲಿ ತಮ್ಮ ವರಿಷ್ಠರ ಮನೆಗೆ ಹೋಗುತ್ತಿರುತ್ತಾರಷ್ಟೇ? ಅಷ್ಟರಲ್ಲಿ ನಾವು ನಾಟಕಕ್ಕೆ ಹೋಗಿ ಬರೋಣ. ಆ ನಾಟಕದ ೩ನೇ ಅಂಕ ವಾದೊಡನೆ ನಾವು ಬಂದುಬಿಡೋಣ, ಅಂದರಾಯಿತು," ಎಂದನು.

ಡಾಕ್ಟರನ ಆ ನುಡಿಯನ್ನು ಕೇಳಿ ಸರಸಕ್ಕನು ಮುಟ್ಟಬಿದ್ದಳು. ಅವಳ ಕಣ್ಣಿಗೆ ಹೊಸ ಸೃಷ್ಟಿಯ ದೃಶ್ಯಗಳು ಕಾಣಲಾರಂಭಿಸಿದವು. ಡಾಕ್ಟರನ ಮಾತಿಗೆ ಸಿಟ್ಟಾಗಬೇಕೋ-ಆನಂದಪಡಬೇಕೋ ಎಂಬದು ಅವಳಿಗೆ ತಿಳಿಯದಾಯಿತು. ಅವಳ ಅಂತಃಕರಣದಲ್ಲಿ ಪಾಪ-ಪುಣ್ಯಗಳ, ಸುಖ-ದುಃಖಗಳ ದ್ವಂದ್ವ ಯುದ್ಧವು ಪ್ರಾರಂಭವಾಯಿತು.

ಅಷ್ಟರಲ್ಲಿ ಚಹಾ ತಯಾರಾದ್ದರಿಂದ ಅವಳು ಅದನ್ನು ಒಂದು ಕಪ್ಪಿನಲ್ಲಿ ಸುರುವಿ ಡಾಕ್ಟರನ ಎದುರಿಗಿಟ್ಟಳು. ಡಾಕ್ಟರನು ಎಂದಿನಂತೆ ಅವಳನ್ನು ಸ್ತುತಿಸುತ್ತ, ಮಿಕಿ ಮಿಕಿ ಅವಳ ಮೋರೆಯ ಕಡೆಗೆ ನೋಡುತ್ತ ಆ ಚಹಾದ ಕಪ್ಪನ್ನು ಗಂಟಲಲ್ಲಿ ಸುರುವುತ್ತಿದ್ದನು.

ಸರಸಕ್ಕನ ಚಂಚಲ ಮನಸ್ಥಿತಿಯು ಅವಳ ಮುಖದ ಮೇಲೆ ಚೆನ್ನಾಗಿ ಒಡೆದು ಕಾಣಿಸಹತ್ತಿತು. ಅದನ್ನು ಕಂಡು ಡಾಕ್ಟರನು ಮನಸ್ಸಿನಲ್ಲಿ— ನನ್ನ ಪ್ರಯತ್ನವು ನಿರರ್ಥಕವಾಗಲಿಲ್ಲ. ಭಲೆ, ಇವಳಂಥ ನವತರುಣಿಯನ್ನು ಮರುಳು ಮಾಡುವದಕ್ಕೆಷ್ಟು ತಡ? ಮುದಿಗಂಡನ ಸಹವಾಸಕ್ಕೆ ಬೇಸತ್ತಿರುವ ಈ ಹರಿಣಿಯನ್ನು ಹೇಗಾದರೂ ಹರಣ ಮಾಡಲೇಬೇಕು; ಆದರೆ ಈಗ ಇವಳೊಡನೆ ಹೆಚ್ಚು ಮಾತಾಡುವದು ತರವಲ್ಲೆಂದು ಬಗೆದು, ಎದ್ದು ನಿಂತು—ಅತಿಗೀ, ಈಗ ೧೫-೨೦ ದಿನಗಳಿಂದ ನಾನು ನಿಮ್ಮಲ್ಲಿ ಚಹಾ ಕುಡಿಯುತ್ತಿರುವೆನಲ್ಲವೆ? ಆದರೆ ಇಂದಿನಷ್ಟು ಅತ್ಯುತ್ಕೃಷ್ಟ ಚಹವು ಈ ವರೆಗೆ ನಿಮಗೂ ಸಾಧಿಸಿದ್ದಿಲ್ಲ, ಎಂದಂದು ಅಲ್ಲಿಂದ ಹೊರಡಲು,

ಸ್ವಭಾವತಃ ಮುಖಸ್ತುತಿಗೆ ಒಲಿಯುವ ಸರಸಕ್ಕನು ಆಗ ತನ್ನ ಅಂತರಂಗದಲ್ಲಿಯ ವಿಷಣ್ಣತೆಯನ್ನೆಲ್ಲ ಹೊರದೂಡಿ, ಡಾಕ್ಟರನ ಕಡೆಗೆ ಒಮ್ಮೆ ಓರೆನೋಟದಿಂದ ನೋಡುತ್ತ ಹೊರಡಲು ಸಮ್ಮತಿಯನ್ನಿತ್ತಳು.

---

## ನಾಲ್ಕನೇ ಓರೆನೋಟ.

—(೦)—

ಡಾಕ್ಟರನು ಹೋಗುವಾಗ ಸರಸಕ್ಕನು ಚಹಾಕುಡಿಯುತ್ತಿದ್ದಳು. ಆದರಿಂದ ಮರುದಿನ ಹೋಗಬೇಕಾಗಿದ್ದ ನಾಟಕದ ಬಗ್ಗೆ ಅವಳು ಹೆಚ್ಚು ಚಿಕಿತ್ಸೆಮಾಡದೆ, ಗೋಣು ಅಲ್ಲಾಡಿಸಿ ಅವನಿಗೆ ಹೊರಡಲು ಸಮ್ಮತಿಯ ನ್ನಿತ್ತಳು. ಆಗ ಅವರು ಆ ನಾಟಕದ ಬಗ್ಗೆ ಹೆಚ್ಚು ಪೃಚ್ಛಾಪೃಚ್ಛ ಮಾಡ ದಿದ್ದುದೇ ವಿಹಿತವಾಯಿತು; ಮತ್ತು ಅದರಿಂದಲೇ ಅವರೀರ್ವರೂ ತಮ್ಮ ತಮ್ಮ ಅಂತರಂಗದಲ್ಲಿ ಮರುದಿವಸ ಹೋಗಬೇಕಾಗಿದ್ದ ಆ ನಾಟಕದ ಬಗ್ಗೆ ಒಂದೇಸವನೆ ಆಲೋಚಿಸತೊಡಗಿದರು. ಅದರ ಬಗ್ಗೆ ಆಗಲೇ ನಿಷ್ಕ ರ್ಷವಾಗಿಬಿಟ್ಟದ್ದರೆ, ಅವರು ಪುನಃಪುನಃ ಆ ವಿಷಯವಾಗಿ ಆಲೋಚಿಸು ತ್ತಿರಲಿಲ್ಲ. ಆ ನಾಟಕದ ಸಂಗತಿಯನ್ನು ನಿಷ್ಕರ್ಷಿಸುವದು ಅಂದು ಅವರೀರ್ವರ ಮನಸ್ಸಿನಲ್ಲಿಯೂ ಬಾರದ್ದರಿಂದ, ಇಬ್ಬರೂ ತಮ್ಮಷ್ಟಕ್ಕೆ ತಾವು ಆ ಸಂಗತಿಯ ಚರ್ಚೆಯನ್ನು ಮುಂದರಿಸಲಿಕ್ಕೆ ಹೆದರುತ್ತಿದ್ದರು. ಈಗಲೆ ಇದನ್ನು ಕಟ್ಟು-ನಿಟ್ಟಗೆ ಹಚ್ಚಿದರೆ ಎಲ್ಲಿ ಪ್ರತಿಕೂಲ ಮತ ಬೀಳು ವದೋ ಎಂದು ಇಬ್ಬರೂ ಭಾವಿಸಿ ಅಂದು ಆ ಬಗ್ಗೆ ಹೆಚ್ಚು ಚರ್ಚಿಸಲಿಲ್ಲ.

ರಂಗನಾಥರಾಯನು ದವಾಖಾನೆಗೆ ಹೋಗಿ ತನ್ನ ಕೆಲಸಕ್ಕೆ ತೊಡ ಗಿದನೇನೋ ನಿಜ; ಆದರೆ ಅಂದು ಅವನ ಲಕ್ಷ್ಯವು ಅಲ್ಲಿಯ ಯಾವ ಕೆಲಸ ದಲ್ಲಿಯೂ ಭಾಗ ತಕ್ಕೊಳ್ಳಲಿಕ್ಕೆ ಒಪ್ಪದಾಯಿತು. ದವಾಖಾನೆಯ ಎದು ರಿಗಿನ ಮನೆಯ ಗೋಡೆಗೆ ಅಂಟಿಸಿದ್ದ 'ವಿಷಮವಿವಾಹ' ನಾಟಕದ ಭವ್ಯ ವಾದ ಪಾಲ್‍ಬಿಲ್ಲು ಅವನ ದೃಷ್ಟಿಯನ್ನು ಆಗಾಗ್ಗೆ ಸೆಳೆಯುತ್ತಿತ್ತು; ಹಾಗು ಪ್ರತಿಕ್ಷಣದಲ್ಲಿಯೇ ಅವನ ಮನಸ್ಸು ಅವನನ್ನು ಕುರಿತು—"ಯಾಕೆ ಡಾಕ್ಟರರೇ, ಈ ಬಗ್ಗೆ ನಿಮ್ಮ ನಿಷ್ಕರ್ಷವೇನಾಯಿತು?" ಎಂದು ಕೇಳುತ್ತಿತ್ತು.

ಇತ್ತ ಸರಸಕ್ಕನ ಮನಸ್ಸಿನಲ್ಲಾದರೂ ಅದೇ ವಿಷಯದ ತರಂಗ ಗಳು ಮೇಲಿಂದ ಮೇಲೆ ಏಳುತಲಿದ್ದವು. ಮಾಗಿಯ ಕಾಲದೊಳಗೆ ಸೂರ್ಯನು ಹೇಗೆ ಒಮ್ಮೆ ಅತ್ಯುಗ್ರನಾಗಿಯೂ ಪರಕ್ಷಣದಲ್ಲಿ ತೀರ ಮಂದ ಕಿರಣನಾಗಿಯೂ ಭಾಸಿಸುವನೋ, ಅದರಂತೆಯೇ ಸರಸಕ್ಕನ ಮನಸ್ಸು

ಅಂದು ಒಮ್ಮೆ ಸುವಿಚಾರದಿಂದಲೂ ಮತ್ತೊಂದು ಕ್ಷಣದಲ್ಲಿ ಅವಿಚಾರ ದಿಂದಲೂ ಗ್ರಸ್ತವಾಗಿ ಹೋಗುತ್ತಿತ್ತು. ತಾನು ತಾಳಗೆಟ್ಟು ನಡೆಯು ಹತ್ತಿರುವೆನೆಂದೂ, ಈ ಬಗ್ಗೆ ಹೀಗೆಯೇ ಮನಸರಿ ಮಾಡಿದರೆ ತನ್ನ ಅಧಃ ಘಾತವಾಗುವದೆಂದೂ, ಅದಕ್ಕಾಗಿ ಅವರಿಗೆ ಸಿಟ್ಟುಬಂದರೂ ಚಿಂತೆಯಿಲ್ಲ- ಇನ್ನು ತಮ್ಮ ಮನೆಗೆ ಆ ರಂಗನಾಥಡಾಕ್ಟರನನ್ನು ಬರಗೊಡಲೇ ಬಾರ ದೆಂದೂ ಒಮ್ಮೆ ಅವಳಿಗೆ ಅನಿಸಲು, ಅದರಂತೆ ಆವಳ ಮನೋನಿಶ್ಚಯವಾ ದಂತೆ ತೋರುತ್ತಿತ್ತು. ಆದರೆ ತುಸ ಹೊತ್ತಿನಲ್ಲಿಯೇ ಒಂದಾನೊಂದು ಸಾರೆ ಆ ಡಾಕ್ಟರರೊಡನೆ ನಾಟಕಕ್ಕೆ ಹೋದರೆ ತಪ್ಪೇನು? ನಮ್ಮನ್ನು ಅಲ್ಲಿ ಗುರ್ತಿಸುವವರಾರು? ಗುರತಿಸಿದರೂ ಆವರೊಡನೆ ನಾಟಕ್ಕೆ ಹೋದರೆ ಅಂಥ ಯಾವ ಪಂಚಮಹಾಪಾತಕ ಮಾಡಿದಂತಾಗುವದು? ಈ ವಿಸ್ತೃತ ವಾದ ಮುಂಬಯಿಪಟ್ಟಣದೊಳಗಿನ ಇಷ್ಟುಜನ ಗಂಡಸು-ಹೆಂಗಸರು ದಿನಾಲು ನಾಟಕ-ಸಿನೇಮಾದಿಗಳಿಗೆ ಹೋಗುವರಲ್ಲ; ಅವರನ್ನೆಲ್ಲ ಪಾಪಿ ಗಳೇ ಎನ್ನಬಹುದೇ? ಛೇ! ಇಲ್ಲದ ಸಂಶಯಪಿಶಾಚಿಯಿದು! ನಾಳೆಗೆ ಡಾಕ್ಟರರೊಡನೆ ನಾಟಕಕ್ಕೆ ಹೋಗಲಿಕ್ಕೆ ಏನೂ ಅಡ್ಡಿಯಿಲ್ಲ; ಆದರೆ ಏನು ಮಾಡಬೇಕಾಗಿದೆಯೋ ಅದನ್ನೆಲ್ಲ ಮನೆಯವರಿಗೆ ಹೇಳಿ ಕೇಳಿ ಮಾಡ ಬೇಕು. ಕದ್ದು ಮುಚ್ಚಿ ಮಾಡಕೂಡದು. ರಂಗನಾಥರಾಯರ—"ಅವರು ಮನೆಯಲ್ಲಿಲ್ಲದಾಗ ನಾವಿಬ್ಬರೇ ಹೋಗೋಣ" ಎಂಬ ಸೂಚನೆಯು ಮಾತ್ರ ತುಸ ಅತಿಪ್ರಸಂಗದ್ದಾಗಿ ತೋರುತ್ತದೆ. ಆದರೆ ನಾಟಕಕ್ಕೆ ಹೋಗುವ ಅವರ ಸೂಚನೆಯೇನೂ ಅಲ್ಲಗಳೆಯತಕ್ಕದ್ದಾಗಿರುವದಿಲ್ಲ.

ಸರಸಕ್ಕನ ಮನಸ್ಸಿನಲ್ಲಿ ಮೇಲೆ ಹೇಳಿದ ವಿಚಾರಗಳು ಬರಲಿಕ್ಕೂ, ನರಸನಗೌಡರು ತಮ್ಮ ಕಚೇರಿಯ ಕೆಲಸ ತೀರಿಸಿ ತಮ್ಮ ಮನೆಯನ್ನು ಸೇರಲಿಕ್ಕೂ ಗಂಟೇಬಿದ್ದಿತು ಅವರು ಬಂದಕೂಡಲೆ ಅವರ ಕೂಡ ನಾನಾ ಬಗೆಯ ಹುಡುಗಾಟಿಕೆ ಮಾಡಿ "ನಾವು ನಾಳೆ ಎಲ್ಲಿಗೋ ಹೋಗಬೇಕೆಂದಿ ರುವೆವು. ಹೇಳಿರಿ ನೋಡೋಣ, ಎಲ್ಲಿಗೆಂಬದನ್ನು?" ಹೀಗೆಂದು ಅಚ್ಚೆ ಯಿಂದ ಕೇಳಬೇಕೆಂಬ ದೃಢನಿಶ್ಚಯವನ್ನು ಸರಸಕ್ಕನು ಆ ಮೊದಲು ಹತ್ತೆಂಟು ಸಾರೆಯಾದರೂ ತನ್ನ ಮನಸ್ಸಿನಲ್ಲಿ ಮಾಡಿಟ್ಟುಕೊಂಡಿದ್ದಳು. ನರಸನಗೌಡನು ಇಮ್ಮನೇ ವರನಾಗಿರದೆ, ಪ್ರಥಮ ವರನಾಗಿ ಸರಸಕ್ಕನ ಸರಿಜೋಡಿಯವನಾಗಿದ್ದರೆ, ಅವಳು ತನ್ನ ವಿಚಾರವನ್ನು ಆ ಕೂಡಲೆ

ಆಚಾರದಲ್ಲಿ ತರುತ್ತಿದ್ದಳು. ತರುಣ ದಂಪತಿಗಳು ಪರಸ್ಪರರಲ್ಲಿ ಇಂಥ ಅಚ್ಚಿದ ಅನೇಕ ಮಾತುಗಳನ್ನಾಡುತ್ತಿರುತ್ತಾರೆ. ಅವರ ಆ ನಿಷ್ಕಪಟ ಮತ್ತು ಪರಸ್ಪರ ಸಹಕಾರದ ಯೋಗದಿಂದ ಅವರ ತಾರುಣ್ಯದ ದಿನಗಳು ಮಾಗಿಯ ಕಾಲದ ಹಗಲಿನಂತೆ ಬಹು ಬೇಗ ಕ್ರಮಿಸುತ್ತಿರುತ್ತವೆ.

ಆದರೆ ನರಸನಗೌಡನ ಆ ನೀರಿಗೆಗಟ್ಟಿದ ಕಲಾಹೀನ ಮುಖಮುದ್ರೆಯು ಕಣ್ಣಿಗೆ ಬಿದ್ದಕೂಡಲೆ ಸರಸಕ್ಕನ ಈ ಮೊದಲಿನ ಮನೋಗತಗಳೆಲ್ಲ ಸುಂಟರಗಾಳಿಯ ಪಾಲಾದವು! ಮೇಲೆ ಹೇಳಿದ ಅಚ್ಚಿಯ ನುಡಿಗಳು ನಾಲ್ಕು ನಾಲ್ಕು ಸಾರೆ ಅವಳ ತುಟಿಯವರೆಗೆ ಬಂದು, ಪುನಃ ಹೃದಯವನ್ನು ಸೇರಿ ಜೀರ್ಣವಾಗಿಬಿಟ್ಟವು. ಗಂಡನ ಆ ವಿಶೇಷ ಗಂಭೀರ (ಸುಡುಗಾಡು) ಮುಸುಡಿಗೆ ಹೆದರಿ ಆ ಶಬ್ದಗಳು ಅವಳ ಬಾಯಿಂದ ಹೊರಬೀಳಲೇ ಇಲ್ಲ.

ರಾತ್ರಿಯು ಕಳೆಯಿತು. ಎಂದಿನಂತೆ ದಿನಕರನು ತನ್ನ ಹೊಂಬಣ್ಣದ ಕಿರಣಗಳನ್ನು ಮಾನವರ ಮನೆ-ಮಾರುಗಳ ಕಿಟಕಿ ಬೆಳಕಿಂಡಿಗಳ ಸಂದಿ-ಗೊಂದಿಗಳಲ್ಲಿ ಚಾಚಿ ಅವರನ್ನು ಜಾಗೃತಗೊಳಿಸಿದನು. ಜಗತ್ತಿನ ಪ್ರಾಣಿಗಳೆಲ್ಲ ನಿದ್ದೆಯಿಂದ ತಿಳಿದೆದ್ದು, ಉದ್ಯೋಗದಲ್ಲಿ ತೊಡಗಿದವು. ನಮ್ಮ ನರಸನಗೌಡನಾದರೂ ಸ್ನಾನ, ಊಟ ತೀರಿಸಿ ತನ್ನ ಕಚೇರಿಗೋ ಮತ್ತೆಲ್ಲಿಗೋ ಹೊರಟು ನಿಂತನು. ಅವನು ತಲೆಬಾಗಿಲ ದಾಟ ಹೋಗುವವರೆಗೂ ನಾಟಕದ ವಿಷಯವನ್ನು ಅವನಿಗೆ ತಿಳಿಸಿ ಅವನ ಸಮ್ಮತಿಯನ್ನು ಪಡೆಯುವ ಆತುರತೆಯು ಸರಸಕ್ಕನಲ್ಲಿತ್ತು. ಆದರೆ ಆ ನಿಶ್ಚಯವು ಕಡೆಗೂ ಸಿದ್ಧಿಸಲಿಲ್ಲ. ಅವಳ ತುಟಿಗಳು ಮನೋಗತವನ್ನು ಹೊರಚೆಲ್ಲಲಿಕ್ಕೆ ಎಷ್ಟೋ ಸಾರೆ ತತ್ಪರವಾಗುತ್ತಿದ್ದವು. ಆದರೆ ಅವಳಲ್ಲಿಯ ಸಂಕೋಚಭಾವವು ಸಣ್ಣ ಹುಡುಗರ ಕೆನ್ನೆಯ ಮೇಲೆ ಹೊಡೆದು ಅವುಗಳನ್ನು ಸುಮ್ಮನಿರಿಸಲು ಯತ್ನಿಸುವಂತೆ, ಆ ತುಟಿಗಳನ್ನು ಒಮ್ಮೆಲೆ ಚೇತನಾಹೀನಗೊಳಿಸುತಲಿತ್ತು. ಕಟ್ಟಕಡೆಗೆ ನರಸನಗೌಡನು ಮನೆಯ ಹೊಸ್ತಿಲದ ಹೊರಗೆ ಕಾಲಿಟ್ಟ ಕೂಡಲೆ ಸರಸಕ್ಕನ ತುಟಿಗಳು ಹಗೆಯೊಳಗೆ ಬಿದ್ದ ಮನುಷ್ಯನ ದನಿಯಂತೆ ಬಹು ಮೆಲ್ಲಗೆ—"ನಾಥ-ನಾ-ಥ........" ಎಂದು ಕೂಗಿಕೊಂಡವು. ಆದರೆ ದಿನಕ್ಕಿಂತ ಮನೆಯಿಂದ ಹೊರಡಲು ತಡವಾದ್ದರಿಂದ ಗೌಡನ ಚಿತ್ತವು ತನ್ನ ನಿರ್ದಿಷ್ಟ ಹಾದಿಯ ಕಡೆಗೇ ವೇಧಿಸಿ ಬಿಟ್ಟತ್ತಾದ್ದರಿಂದ

ಅವನಿಗೆ ತನ್ನ ಎರಡನೇ ಹೆಂಡತಿಯು ಆ ಸಂಕೋಚಗ್ರಸ್ತ ಅಸ್ಫುಟ ಕೂ-
ಗೋಣವು ಕೇಳಿಸಲಿಲ್ಲ.

ಗಂಡನು ಹೊರಟು ಹೋದ ಬಳಿಕ ತಾನಿಂದು ನಾಟಕಕ್ಕೆ ಹೋಗ
ಲೇಬಾರದೆಂದು ಆ ಮಾನಿನಿಯು ಗೊತ್ತು ಮಾಡಿಕೊಂಡಳು. ಏನಾದರೂ
ಇಂದು ತಾನು ನಾಟಕಕ್ಕೆ ಹೋಗಲೇ ಕೂಡದೆಂದು ಹಟ ಹಿಡಿದಳು.
"ತಾನು ಒಳ್ಳೇ ಧೈರ್ಯದವಳೆಂದೂ, ಯಾರ ಮುಲಾಜನ್ನೂ ಇಡದೆ ತನ್ನ
ಮತವನ್ನು ಬೇಕಾದವರೆದುರಿಗೆ ನಿರ್ಭಿಡೆಯಿಂದ ತಿಳಿಸುವವಳೆಂದೂ ತನ್ನ
ಗೆಳತಿಯರು ತನ್ನನ್ನು ಈ ವರೆಗೆ ಪ್ರಶಂಸಿಸುತ್ತ ಬಂದಿದ್ದರು. ತಾನಾದರೂ
ಈ ವರೆಗೆ ಅದರಂತೆಯೇ ವರ್ತಿಸುತ್ತಿದ್ದೆನು. ಆದರೆ ಇಂದಿನ ಪ್ರಸಂಗ
ದಲ್ಲಿ ಈ ನಾಟಕದಂಥ ಕ್ಷುಲ್ಲಕ ಸಂಗತಿಯನ್ನು ತನ್ನ ಗಂಡನಿಗೆ ಕೇಳಲಿಕ್ಕೆ
ಯಾವ ಕಾರಣದಿಂದಲೋ ಮುಖಹೀನತೆಯು ಪ್ರಾಪ್ತವಾಗಿರುವದರಿಂದ
ತಾನು ಇಂದು ಆ ನಾಟಕಕ್ಕೆ ಹೋಗಲಿಕ್ಕೆ ಸರ್ವಥಾ ಅಪಾತ್ರಳಿರುವೆ
ನೆ"ಂದು ಅವಳು ತಿಳಿದಳು.

ಮೇಲೆ ಹೇಳಿದಂತೆ ಸರಸಕ್ಕನು ದೃಢಸಂಕಲ್ಪದಿಂದ ಕೂರಲಿಕ್ಕೂ,
ಡಾಕ್ಟರರು ಮುಗುಳು ನಗೆಯಿಂದ ಮೆಲ್ಲ ಮೆಲ್ಲನೆ ಅಲ್ಲಿಗೆ ಬರಲಿಕ್ಕೂ
ಕೂಡಿಬಂತು. ಅವರು ಬರಹತ್ತಿದಾಗ—"ತಾನಿಂದು ನಾಟಕಕ್ಕೆ ಬರುವ
ದಿಲ್ಲ" ಎಂದು ತಿಳಿಸಬೇಕೆಂದು ಸರಸಕ್ಕನು ಪಾಠಮಾಡುತ್ತಿದ್ದಳು. ಡಾಕ್ಟ
ರನು ದೂರಿನಿಂದಲೇ ಸರಸಕ್ಕನ ಮುಖಭಾವವನ್ನು ಕಂಡು ಅವಳ ಮನೋ
ಗತವನ್ನು ತಿಳಿದನು. ಅದರಿಂದ ಅಲ್ಲಿಂದಲೇ ಹಿಂದಿರುಗಬೇಕೆಂದೂ ಅವನಿ
ಗೊಮ್ಮೆ ಅನಿಸಿತು. ಆದರೆ ಯಾವುದೊಂದು ಸಂಗತಿಯ ಉತ್ಕಟೇಚ್ಛೆಯು
ಮನುಷ್ಯನನ್ನು ಎಂದೂ ಹೀಗೆ ಹಿಂದಿರುಗಗೊಡುವದಿಲ್ಲ. ಡಾಕ್ಟರನ ಸ್ಥಿತಿ
ಯಾದರೂ ಅಂದು ಹಾಗೆಯೇ ಆಯಿತು. ಸರಸಕ್ಕನ ಮುಖಚರ್ಯೆ
ಯಿಂದಲೇ ನಾಟಕದ ವಿಷಯದ ಅವಳ ನಕಾರವು ಹೊಳೆದಿದ್ದರೂ
ಅವನು ನಿರಾಶನಾಗದೆ, ಅವಳ ಹತ್ತರಕ್ಕೆ ಹೋಗಿ—

"ಅತ್ತಿಗೀ, ನಿಮಗೆ ಗೊತ್ತಾಯಿತೇನು?" ಎಂದು ಪ್ರಶ್ನ ಮಾಡಿ
ಮಾತಾಡಲಿಕ್ಕೆ ಪ್ರಾರಂಭಿಸಿದನು.

"ಅದೇನು ಡಾಕ್ಟರರೇ?" ಸರಸಕ್ಕನು ತನ್ನ ಮನೋನಿಶ್ಚಯದ
ಬಿಗುವನ್ನು ತುಸ ಸಡಲಿಸಿ ನುಡಿದಳು.

"ಅತ್ತಿಗೀ, ನಿನ್ನೆ ನಿಮಗೊಂದು ಮಹತ್ವದ ಸಂಗತಿಯನ್ನು ತಿಳಿಸ ಲಿಕ್ಕೆ ನಾನು ತೀರ ಮರೆತೆನು." ಎಂದು ಡಾಕ್ಟರನು ಶ್ರುತಿಹಾಕಲು,

"ಏನು, ಅದೇನು?" ಎಂದು ಸರಸಕ್ಕನು ಉತ್ಸುಕತೆಯಿಂದ ಪ್ರಶ್ನ ಮಾಡಿದಳು.

"ಅತಿಗೀ, ಇಂದು ಗಂಧರ್ವಕಂಪನಿಯು ಸಂಯುಕ್ತನಾಟಕವದೆ."

"ಸಂಯುಕ್ತನಾಟಕವೇ ? ಹಾಗೆಂದರೇನು? ಅದಾವ ಹೊಸ ನಾಟಕವು?"

"ಸಂಯುಕ್ತನಾಟಕವೆಂದರೆ ಅದೊಂದು ಹೊಸ ಆಟವಲ್ಲ. ಮಹಾ ರಾಷ್ಟ್ರ ಹಾಗು ಕರ್ನಾಟಕ ನಾಟಕಮಂಡಳಿಯೊಳಗಿನ ಶ್ರೇಷ್ಠ ಅಭಿನಯ ಪಟುಗಳು ಒಟ್ಟುಗೂಡಿ ನಡಿಸುವ ಪ್ರಯೋಗಕ್ಕೆ ಸಂಯುಕ್ತನಾಟಕವೆನ್ನು ವರು. ಅವರೆಲ್ಲರೂ ಕೂಡಿ ಇಂದಿನ ಆ **ವಿಷಮವಿವಾಹ** ನಾಟಕವನ್ನಾ ಡತಕ್ಕವರಿರುತ್ತಾರೆ."

"ಹಾಗೆಲ್ಲವೇ! ಹಾಗಾದರೆ ಇಂದಿನ ಆ ನಾಟಕಕ್ಕೆ ಯಾವ ಯಾವ ಶ್ರೇಷ್ಠ ನಟರು ಕಲೆಯುತಕ್ಕವರಿರುತ್ತಾರೆ?"

"ಮಹಾರಾಷ್ಟ್ರದೊಳಗಿನ ಬಾಲಗಂಧರ್ವ ಮೊದಲು ಮಾಡಿ ಕೊಂಡು ಎಲ್ಲ ಪ್ರಸಿದ್ಧ ನಾಟಕ ಕಂಪನಿಗಳೊಳಗಿನ ಸುಪ್ರಸಿದ್ಧ ನಟರೂ, ಕರ್ನಾಟಕದೊಳಗಿನ ಶಿರಹಟ್ಟಿಯ ಶ್ರೀ ಮಹಾಲಕ್ಷ್ಮೀಪ್ರಸಾದಿಕ ನಾಟಕದೊಳಗಿನ ಶ್ರೀಯುತ ವೆಂಕೋಬರಾವ, ವಾಮನರಾವರೇ ಮೊದ ಲುಮಾಡಿಕೊಂಡು ಎಲ್ಲಾ ಕನ್ನಡ ನಾಟಕದೊಳಗಿನ ಪ್ರಸಿದ್ಧ ಅಭಿನಯ ಪಟುಗಳೂ ಇಂದು ಆ ಗಂಧರ್ವನಾಟಕದ ರಂಗಭೂಮಿಯನ್ನು ವಿರಾಜಿಸಿ, ಆ ವಿಷಮವಿವಾಹ ನಾಟಕವನ್ನು ಅಭಿನಯಿಸತಕ್ಕವರಿರುತ್ತಾರೆ. ಅತ್ತಿಗೀ, ವಿಷಮವಿವಾಹವು ಇಂದಿನಷ್ಟು ಎಂದೂ ಸುಂದರವಾಗಲಿಕ್ಕಿಲ್ಲ. ಅಂತೇ ಈಗಿನಿಂದಲೇ ಆ ನಾಟಕಗೃಹದೊಳಗೆ ನಿಲ್ಲಲಿಕ್ಕೆ ಕೂಡ ಸ್ಥಳವಿಲ್ಲದಾಗಿದೆ. ನಾನು ನಿನ್ನೆಯೇ ಹತ್ತು ರೂಪಾಯಿ ಬೆಲೆಯ ಎರಡು ಟಿಕೀಟುಗಳನ್ನು ಕೊಂಡು ಒಂದು ಕ್ಯಾಬಿನ್ನನ್ನೂ ರಿಝರ್ವ ಮಾಡಿಸಿದೆನೆಂದು ನೆಟ್ಟಗಾ ಯಿತು. ಇಲ್ಲದಿದ್ದರೆ ಇಷ್ಟೊತ್ತಿಗೆ ಅವುಗಳ ಬೆಲೆಯು ೨೫ರೂ. ಆಗು ತ್ತಿದ್ದು, ಕ್ಯಾಬಿನ್ನುಗಳಂತೂ ಸಿಗುತ್ತಲೇ ಇರಲಿಲ್ಲ!" ಎಂದವನೇ ರಂಗೆ

ನಾಥರಾಯನು ತನ್ನ ಜೇಬಿನೊಳಗಿನ ಆ ಎರಡು ಟಿಕೀಟುಗಳನ್ನೂ ರಿಝು ರ್ವಸ್ಯಾಸನ್ನೂ ಅವಳ ಮುಂದೆ ಹಿಡಿದನು.

ಅವನ್ನು ನೋಡಿ ಸರಸಕ್ಕನ ಬಾಯಿಂದ ನಕಾರದ ಉತ್ತರವು ಹೊರಡಲಿಲ್ಲ. ನಾಟಕಕ್ಕೆ ಬರುವದಿಲ್ಲೆಂದು ಡಾಕ್ಟರರಿಗೆ ಸ್ಪಷ್ಟವಾಗಿ ತಿಳಿಸಬೇಕೆಂದಿದ್ದ ತನ್ನ ಈ ಪೂರ್ವದ ವಿಚಾರವನ್ನು ಅವಳು ಬದಿಗೊತ್ತಿ, ಅಂದು ಮಧ್ಯಾಹ್ನದೊಳಗಿನ ಆ ನಾಟಕಕ್ಕೆ ಹೊರಡುವ ಸಿದ್ಧತೆ ಮಾಡ ತೊಡಗಿದಳು.

ಸರಸಕ್ಕನು ಸಜ್ಜಾಗಿ ಹೊರಟು ನಿಂತಳು. ಮೊದಲು ಅವಳ ಮನ ಸ್ಸಿನಲ್ಲಿ ದಿನಾಲು ಉಡುವ ಸೀರೆಯನ್ನೇ ಉಟ್ಟುಕೊಂಡು, ವಿಶೇಷ ವಸ್ತ್ರ- ಒಡವೆಗಳನ್ನು ಹಾಕಿಕೊಳ್ಳದೆ, ಗಂಡನು ಮನೆಗೆ ಬಂದೊಡನೆ ಅವನನ್ನು ಕರಕೊಂಡು ರಂಗನಾಥರಾಯನೊಡನೆ ಅಂದಿನ ಆ ವಿಷಮವಿವಾಹ ನಾಟ ಕಕ್ಕೆ ಹೋಗುವ ವಿಚಾರವಿತ್ತು; ಆದರೆ ತುಸ ಹೊತ್ತಿನಲ್ಲಿ ಅವಳ ಆ ವಿಚಾರವು ಅವಳಿಗೇ ಹೇಯವಾಗಿ ತೋರಿದ್ದರಿಂದಲೋ ಏನೋ ಅವ ಳೊಂದು ಗುಲಾಬೀಬಣ್ಣದ ಚಿಕ್ಕೆ ಚಿಕ್ಕೆಯ ಸೂಕ್ಷ್ಮವಾದ ಭಾರೀಬೆಲೆಯ ಸೀರೆಯನ್ನು ತೆಗೆದಳು. ಅದನ್ನುಟ್ಟನಂತರ ಈವರೆಗೆ ಮೈಯಲ್ಲಿ ತೊಟ್ಟದ್ದ ಸಾದಾ ಕುಪ್ಪಸವು ಅವಳ ಮನಸ್ಸಿಗೆ ಹೇಗೆ ಬರಬೇಕು? ನಂತರ ಅವಳು ಆ ಗಂಟು, ಈ ಗಂಟು, ದೊಡ್ಡ ಪೆಟ್ಟಿಗೆ, ಸಣ್ಣ ಪೆಟ್ಟಿಗೆ, ಹಬ್ಬಹುಣ್ಣಿವೆ ಯ ಗಂಟುಗಳನ್ನೆಲ್ಲ ಹುಡುಕಿ ಹುಡುಕಿ ಕಡೆಗೊಂದು ನಯನಮನೋಹರ ವಾದ ಕುಪ್ಪಸವನ್ನು ತೆಗೆದು ತೊಟ್ಟುಕೊಂಡಳು. ಅದರ ಮೇಲೆ ಆದ ಕ್ಕೊಪ್ಪುವಂತಹ (ನೀರಿಗೆಯ ಕುಪ್ಪಸ) ಪೋಲಕವನ್ನು ಏರಿಸಿದಳು. ಬಳಿಕ ಪೈಜಣ ನೂಪುರಗಳನ್ನು ಮೊದಲುಮಾಡಿಕೊಂಡು ತನ್ನ ಎಲ್ಲ ವಸ್ತ್ರಗಳನ್ನೂ ಇಟ್ಟುಕೊಂಡಳು. ಆ ಎಲ್ಲ ದಾಗೀನುಗಳನ್ನು ಹಾಕಿಕೊಂಡ ಆ ನವತರುಣಿ ಯು ಆಗ ಬಹು ಸುಂದರಳಾಗಿ ತೋರಿದರೂ, ಆ ರೂಪವು ಅವಳದವಳಿಗೇ ಸರಿಬರಲಿಲ್ಲ. ಆದರಿಂದ ಅವಳು ಕವಲೆತ್ತಿಗೇರಿಸಿದಂತಹ ತನ್ನ ಮೈಮೇಲಿನ ಆ ಎಲ್ಲ ಪುರಾತನ ಪದ್ಧತಿಯ ವಸ್ತ್ರಗಳನ್ನು ತೆಗೆದಿಟ್ಟು, ಮೋಹನಮಾಲೆ, ಕಂಠಾಭರಣ, ಗುಲಾಬಿಹೂವು ಮುಂತಾದ ಹೊಸ ಫ್ಯಾಶನ್ನಿನ ವಸ್ತ್ರಗಳ ನ್ನಷ್ಟೇ ಇಟ್ಟುಕೊಂಡು, ಕೈಯಲ್ಲೊಂದು ಸೆಂಟುಗಳ ಸುಗಂಧದಿಂದ ಯುಕ್ತ ವಾದ ಕರವಸ್ತ್ರವನ್ನು ಹಿಡಿದು ನಾಟಕಕ್ಕೆ ಹೊರಟಳು. ಇಷ್ಟೆಲ್ಲ ಶೃಂ-

ಗಾರವಾಗುವ ಭರದಲ್ಲಿ ತನ್ನ ಗಂಡನ ಮಾರ್ಗನಿರೀಕ್ಷಣೆ ಮಾಡುವದನ್ನೂ, ಅವನನ್ನು ಅಂದಿನ ನಾಟಕಕ್ಕೆ ಕರೆದೊಯ್ಯುವದನ್ನೂ ಅವಳು ಮರೆತು ಬಿಟ್ಟಳು. ಮರೆತಳೆನ್ನುವದಕ್ಕಿಂತ ಆಬಗ್ಗೆ ಬೇಕಂತ ದುರ್ಲಕ್ಷ ಮಾಡಿದ ಳೆಂದರೂ ಸಲ್ಲಬಹುದು. ಈ ಮೊದಲೇ ಹೊರಗೆ ಹೋಗಿ ಬಾಡಿಗೆಯ ಮೋಟಾರನ್ನು (ಟ್ಯಾಕ್ಸಿಯನ್ನು) ಗೊತ್ತುಮಾಡಿದ್ದ ಡಾಕ್ಟರನು ಅಷ್ಟರಲ್ಲಿ ಒಳಗೆ ಬಂದನು. ಆಗಿನ ಸರಸಕ್ಕನ ವೇಷಭೂಷಣಾದಿಗಳನ್ನೂ, ನಯನ ಮನೋಹರ ರೂಪವನ್ನೂ ನೋಡಿ ಆ ಚಿರಪರಿಚಿತ ಡಾಕ್ಟರನು ಕೂಡ ದಂಗುಬಡಿದು ಕೆಲನಿಮಿಷಗಳವರೆಗೆ ಸುಮ್ಮನೆ ನಿಂತನು. ಬಳಿಕ ಆತನು ಅವಳೊಡನೆ ಕೆಳಗಿಳಿದು ಓಣಿಯೊಳಗಿದ್ದ ಮೋಟಾರಿನಲ್ಲಿ ಪ್ರವೇಶಿಸಿದನು. ಆ ತೈಲರಥವು 'ಪೊಂ-ಪೊಂ' ಎಂದು ದನಿಮಾಡಿ ಓಣಿಯೊಳಗಿನ ಜನರನ್ನು ಬದಿಮಾಡುತ್ತ ವೇಗದಿಂದ ಸಾಗಿತು. ನಾಲ್ಕಾರು ನಿಮಿಷಗಳಲ್ಲೇ ಅದು ಗಂಧರ್ವನಾಟಕ ಶಾಲೆಯ ಹತ್ತರಕ್ಕೆ ಹೋಯಿತು. ಡಾಕ್ಟರನು ಸರಸಕ್ಕ ನೊಡನೆ ಮೋಟಾರಿನಿಂದಿಳಿದನು. ಮಳೆಗಾಲ ಪ್ರಾರಂಭದಲ್ಲಿ ಕಟ್ಟಿರುವೆ ಗಳು ಅಂಗಳ ತುಂಬೆಲ್ಲ ಪಸರಿಸಿರುವಂತೆ, ಅಲ್ಲಿ ಜನಸಮ್ಮರ್ದವು ಹೆಚ್ಚಾ ಗಿತ್ತು. ಆಗ ಸರಸಕ್ಕ—ಡಾಕ್ಟರರೇ, ಈ ಗದ್ದಲದೊಳಗಿಂದ ಪಾರಾಗಿ ಒಳಗೆ ಹೋಗುವ ಬಗೆ ಹೇಗೆ?

ಡಾಕ್ಟರ:—ಇಷ್ಟರಲ್ಲಿ ಒಳಗೆ ಹೋಗುವದಾದರೂ ಏತಕ್ಕೆ? ನಾಟಕ ಪ್ರಾರಂಭವಾಗಲಿಕ್ಕೆ ಇನ್ನೂ ಒಂದು ಒಂದೂವರೆ ತಾಸು ಬೇಕು. ನಮ್ಮ ಕ್ಯಾಬಿನ್ ಮೊದಲೇ ರಿಝರ್ವ ಮಾಡಿಡಲ್ಪಟ್ಟಿರುವದರಿಂದ, ನಾವು ಸ್ಥಳ ಸಿಕ್ಕೀತೋ ಇಲ್ಲವೋ ಎಂಬ ಬಗ್ಗೆ ಪೇಚಾಡುವ ಕಾರಣವಿಲ್ಲ.

ಸರಸಕ್ಕನು ಮುಗುಳು ನಗೆಯಿಂದ—ಡಾಕ್ಟರರೇ ನಿಮ್ಮ ಮುಂಜಾ ಗ್ರತೆಗಾಗಿ ನಿಮ್ಮನ್ನು ಎಷ್ಟು ಹೊಗಳಿದರೂ ಅಲ್ಪವೇ? ಡಾಕ್ಟರರೇ, ನಿಮ್ಮ ಲಗ್ನವಾಗಿದೆಯೇನು? ಎಂದೆನ್ನುತ್ತ ಪುನಃ ಮೋಟಾರಿನಲ್ಲಿ ಕುಳಿತಳು. ಡಾಕ್ಟರನೂ ಹತ್ತಿದನು.

ಡಾಕ್ಟರ:—ಇಲ್ಲ. ಇನ್ನೂ ಮಾಡಿಕೊಂಡಿರುವದಿಲ್ಲ.

ಸರ:—ಅದೇಕೆ? ಸಾಕಷ್ಟು ಪ್ರಾಪ್ತಿಯಾಗುತ್ತಿದ್ದು, ಇಂಥ ಭರ ತಾರುಣ್ಯದಲ್ಲಿ ನೀವಿನ್ನೂ ಲಗ್ನವನ್ನೇಕೆ ಮಾಡಿಕೊಂಡಿಲ್ಲ?

ಡಾಕ್ಟರ:—ಬೇರೆ ಎಲ್ಲವೂ ಅನುಕೂಲವಿದ್ದ ಮಾತ್ರಕ್ಕೆ ಮನಸ್ಸಿಗೆ ಬಾರದ ವಧುವನ್ನು ವರಿಸಬಹುದೇ? ಹೇಗೂ ನಿಮ್ಮ ಮದುವೆಯು

ಮೊನ್ನೆ ಮೊನ್ನೆ ಆಗಿದೆ. ಆ ವಿಷಯದ ನಿಮ್ಮ ತುಸ ಅನುಭವವನ್ನಾದರೂ ನನಗೆ ನಿವೇದಿಸುವಿರಾ?

ಸರ:—ಡಾಕ್ಟರರೇ, ನಿಮ್ಮ ಮಾತೇನೂ ಸುಳ್ಳಲ್ಲ. ಮನಸ್ಸಿಗೆ ಬಾರದ ವಧುವನ್ನು ನೀವೆಂದಿಗೂ ಲಗ್ನವಾಗಬೇಡಿರೆಂದು ನಾನು ಆಗ್ರಹ ಪೂರ್ವಕವಾಗಿ ನಿಮಗೆ ಹೇಳುತ್ತೇನೆ. ಅಂಥ ಒತ್ತಾಯದ ವಿವಾಹದಿಂದ ಗಂಡಹೆಂಡಿರಿಬ್ಬರಿಗೂ ಸುಖವಾಗುವದಿಲ್ಲ. ನನ್ನ ಸ್ವಂತದ ಅನುಭವವನ್ನು ಬೇರೆ ಒಡೆನುಡಿಯುವ ಕಾರಣವಿಲ್ಲ. ತಂದೆಯ ಒತ್ತಾಯಕ್ಕಾಗಿಯೂ, ಸಮಾಜದವರ ವಿರುದ್ಧ ಹೋಗುವ ಮನೋಧೈರ್ಯವಿಲ್ಲದ್ದಕ್ಕಾಗಿಯೂ ನಾನು ನಮ್ಮವರ ಕೈ ಹಿಡಿದಿರುವೆನೆಂಬದು ನಮ್ಮ ಓಣಿಯೊಳಗಿನವರೆಲ್ಲರಿಗೂ ಗೊತ್ತಾಗಿದೆಯೆಂದ ಮೇಲೆ, ನಿಮಗೆ ಅದು ತಿಳಿದಿಲ್ಲವೆಂದು ಹೇಗೆ ಅನ್ನಬೇಕು? ನೀವು ನಿಮಗೆ ಅನುರೂಪಳಾದ ಕನ್ನೆಯನ್ನೇ ಹುಡುಕಿ ಬೇಗನೆ ಲಗ್ನವಾಗಿರಿ. ಅಂದರೆ ನಿಮ್ಮ ಹೆಂಡತಿಯು ನಿಮ್ಮ ಮುಂಜಾಗರೂಕತೆಯನ್ನು ಕಂಡು ನಿಮ್ಮನ್ನು ಹೆಚ್ಚಾಗಿ ಗೌರವಿಸುವಳು. ಇಲ್ಲದಿದ್ದರೆ ಹಿರಿಯರ ಮಬ್ಬಿಗೆ ಬಿದ್ದು ಮನಸ್ಸಿಲ್ಲದ ಯಾವನೊಬ್ಬ ಶ್ರೀ-ಮಂತನ ಮಗಳ ಕೈಹಿಡಿದು ಸಂಸಾರವು ಅಸಾರವೆಂದು ಆ ಮೇಲೆ ಪೇಚಾಡ ಹತ್ತಬಹುದು.

ಡಾಕ್ಟರ:—ಛೀ, ಛೀ, ನಾನಂತಹ ಮರುಳತನಕ್ಕೆ ಎಂದೂ ಹೋಗುವದಿಲ್ಲ. ಲಗ್ನವಾಗಲೇ ಬೇಕೆಂದಿದ್ದರೆ ಈ ಮೊದಲೇ ಯಾವನೊಬ್ಬ ಜಹಗೀರದಾರನ, ಲಕ್ಷಾಧೀಶನ ಇಲ್ಲವೆ ಶ್ರೇಷ್ಠ ಅಧಿಕಾರಿಯ ಕುವರಿಯ ಕೈಹಿಡಿಯುತ್ತಿದ್ದೆನು; ಆದರೆ ಅತಿಗೀ, ಯಾಕೋ ನನ್ನ ಮನಸು ಆ ಕಡೆಗೆ ಎಳೆಯಲೇ ಒಲ್ಲದು. ಇನ್ನು ನಿಮ್ಮೆದುರಿಗೆ ಮುಚ್ಚುಮರೆ ಮಾಡಿ ಪ್ರಯೋಜನವೇನು? ಆದರೆ ನಿಮ್ಮಂತಹ .ಕುಶಲ (ಮನಸ್ಸಿನಲ್ಲಿ-ನಿನ್ನನ್ನೇ) ವಧುವಿನೊಡನೆ ಲಗ್ನವಾಗುವೆನು, ಎಂದು ನಾಲಿಗೆ ಕಚ್ಚುತ್ತ ನುಡಿದು, ಅವಳ ಕಡೆಗೆ ಹೊರಳಿದನು.

ಅವನ ಆ ಕಡೆಯ ವಾಕ್ಯವನ್ನು ಕೇಳಿ ಸಂತೋಷದಿಂದಲೋ-ಸಂ-ತಾಪದಿಂದಲೋ ಸರಸಕ್ಕನು ಓರೆನೋಟದಿಂದ ಒಮ್ಮೆ ಅವನನ್ನು ನೋಡಿದಳು ಮಾತ್ರ.—✓

---

## ಐದನೇ ಓರೆನೋಟ.

—ः[೦]ः—

ಆವರೀರ್ವರಲ್ಲಿ ಹಿಂದೆ ಹೇಳಿದಂತೆ ಸಂಭಾಷಣ ನಡೆದಿರಲು, ಡಾಕ್ಟರನ ಸಂಜ್ಞೆಯಮೇರೆಗೆ ಅವರು ಕುಳಿತ ಮೋಟಾರನ್ನು ಡ್ರಾಯವ್ಹರನು (ಮೋಟಾರಶಾಫರನು) ಒಳ್ಳೇ ವೇಗದಿಂದ ಬಿಟ್ಟಿದ್ದನು. ಅವರು ಕುಳಿತ ಆ ಮೋಟರಕಾರು ಹೊಸದು. ಶಾಫರನೂ ಒಳ್ಳೇ ಹುರುಪಿನವನು. ಮುಂಬಯಿಪಟ್ಟಣದ ನೆಲಕ್ಕೆ ಗಾರೆಮಾಡಿಸಿದಂಥ ನಯವಾದ ಮಾರ್ಗವು. ಅಂದಮೇಲೆ ಕೇಳುವದೇನು? ಆ ಗಾಡಿಯು ಗ್ರ್ಯಾಂಟರೋಡದೊಳಗಿನ ಆ ಪ್ರಸಿದ್ಧ ಗೇಟೀ ಥಿಯೇಟರದಿಂದ ಹೊರಟು ಹಲಕೆಲವು ಸುತ್ತುಗಳನ್ನು ಸುತ್ತಿ ಮಲಬಾರಹಿಲ್ಲಿನ ಮಾರ್ಗದಿಂದ ಬ್ಯಾಕಬೇದ ದಾರಿಹಿಡಿದು ವೇಗದಿಂದ ಸಾಗಿತು. ಆಗ ಮಧ್ಯಾಹ್ನದ ಮೂರನೇ ಪ್ರಹರದ ಸಮಯವು. ಬಿಸಿಲುಗಾಲ. ಆದರೂ ಮೋಟಾರಿನ ಸುತ್ತಲಿನ ಪರದೆಗಳನ್ನೆಲ್ಲ ಏರಿಸಿ ಕಟ್ಟಿತ್ತಾದ್ದರಿಂದ ಆ ಸಮುದ್ರದಂಡೆಯ ಮಾರ್ಗದಲ್ಲಿ ವಿಶೇಷ ತಾಪವೆನಿಸಲಿಲ್ಲ. ಇಷ್ಟೇ ಅಲ್ಲ; ಮೋಟಾರಿನ ವೇಗದಿಂದ ನಸುಗಾಳಿಯು ಸುಳಿದು ಒಳಗೆ ಕುಳಿತವರ ಮನಸ್ಸನ್ನು ಹುರುಪುಗೊಳಿಸುತಲಿತ್ತು.

ನಮ್ಮ ಸರಸಕ್ಕನು ಹುಟ್ಟಾ ಹಳ್ಳಿಯವಳು. ತನ್ನ ತವರೂರಲ್ಲಿದ್ದಾಗ ಅವಳು ಈ ಮೋಟಾರವಾಹನವನ್ನು ಒಂದೆರಡುಸಾರೆ ಕಣ್ಣಿನಿಂದ ಮಾತ್ರ ನೋಡಿದ್ದಳು. ಲಗ್ನವಾಗಿ ಮುಂಬಯಿಗೆ ಬಂದನಂತರ ಅಲ್ಲಿಯ ಆ ಮೋಟಾರ-ಟ್ರಾಮವೇಗಳ ರಹದಾರಿಯನ್ನು ನೋಡಿ ಮೊದಲು ಕೆಲ ದಿನಗಳವರೆಗೆ ಅವಳ ಹೌಹಾರಿಹೋಗಿತ್ತು. ಈಚೆಗೆ ಅವುಗಳ ಬಗ್ಗೆ ಅವಳಿಗೆ ವಿಶೇಷವೇನೂ ಅನಿಸದಿದ್ದರೂ, ನೆರೆಹೊರೆಯ ದಂಪತಿಗಳು ಪ್ರಸಂಗ ವಿಶೇಷದಲ್ಲಿ ಮೋಟಾರಿನಲ್ಲಿ ಕುಳಿತು ನಾಟಕ-ಸಿನೇಮಾ ಇಲ್ಲವೆ ವಾಯುವಿಹಾರಕ್ಕೆ ಹೊರಡುವದನ್ನು ನೋಡಿ, ತಾನೂ ತನ್ನ ಗಂಡನೊಡನೆ ಹೀಗೆ ಒಮ್ಮೆಯಾದರೂ ಮೋಟಾರಿನಲ್ಲಿ ಸಂಚರಿಸಬೇಕೆಂದು ಅವಳಿಗೆ ಅನಿಸಹತ್ತಿತ್ತು; ಆದರೆ ತನ್ನ ಅರಸಿಕ ವೃದ್ಧಪತಿಯ ಮುಂದೆ ಅವಳ ಆಟವೇನೂ ನಡೆದಿರಲಿಲ್ಲ. ಒಮ್ಮೆ ಶ್ರೀ ಬಾಬುಲನಾಥ, ಶ್ರೀ ಮಹಾಲಕ್ಷ್ಮೀ ಮೊದಲಾದ ದೇವಾಲಯಗಳನ್ನು ತೋರಿಸಲಿಕ್ಕೆ ನರಸನಗೌಡನು ಅವಳನ್ನು

ಕರೆದೊಯ್ದಿದ್ದನು; ಆದರೆ ಅವನು ಮೋಟಾರಟ್ಯಾಕ್ಸಿಯಲ್ಲಿ ಅವಳನ್ನೊಯ್ಯದೆ, ಬೇಕಂತ ಒಂದು ವ್ಹಿಕ್ಟೋರಿಯಾ ಬಂಡಿಯನ್ನು ಗೊತ್ತುಮಾಡಿ ಕರೆದೊಯ್ದಿದ್ದನು. ಆದರಿಂದ ಮೋಟಾರಿನಲ್ಲಿ ವಿಹರಿಸುವ ಸುಖವು ಅವಳಿಗೆ ಗೊತ್ತಾಗಿದ್ದಿಲ್ಲ. ಅದು ಇಂದು ಡಾಕ್ಟರ ರಂಗನಾಥರಾಯನೊಡನೆ ನಾಟಕಕ್ಕೆ ಹೋಗುವ ನೆವದಿಂದ ಪ್ರಾಪ್ತವಾಗಿತ್ತು. ಮೋಟಾರಿನಲ್ಲಿ ಡಾಕ್ಟರನ ಪಕ್ಕದಲ್ಲಿ ಕುಳಿತಾಗ ಸರಸಕ್ಕನು ಮನಸ್ಸಿನಲ್ಲಿ—ನನ್ನ ಗಂಡನು ಹೀಗೆಯೇ ತರುಣ ವಯಸ್ಸಿನವನಿದ್ದು, ಇವರಂತೆಯೇ ಹುರುಪಿನವನಿದ್ದರೆ ತಾನೆಷ್ಟು ಧನ್ಯಳಾಗುತ್ತಿದ್ದೆನಲ್ಲ! ಅಥವಾ ಈ ಡಾಕ್ಟರನೇ ತನ್ನ ಗಂಡನಾಗಿ-ದ್ದರೆ........? ಎಂದು ಆಲೋಚಿಸಿ, ಒಮ್ಮೊಮ್ಮೆ ಡಾಕ್ಟರನ ಕಡೆಗೆ ಓರೆನೋಟದಿಂದ ನೋಡುತ್ತಲೂ, ಒಮ್ಮೊಮ್ಮೆ ತನ್ನ ದುರ್ದೈವವನ್ನು ಹಳಿಯುತ್ತಲೂ ಸಾಗಿದ್ದಳು.

ಗೇಟೀಥಿಯೇಟರದಿಂದ ಭರದಿಂದ ಹೊರಟ ಮೋಟಾರವು ಫೋರ್ಟಿನೊಳಗಿನ "ತಾಜಮಹಾಲ" ಹಾಟೆಲ್ಲಿನ ಎದುರಿಗೆ ಹೋಗಿ ನಿಂತಿತು. ಡಾಕ್ಟರನು ಮೋಟಾರದಿಂದಿಳಿದು ಒಳಗೆ ಹೊಕ್ಕನು. ಸರಸಕ್ಕನು ಡಾಕ್ಟರನ ಗೌಡಬಂಗಾಲವನ್ನೇನೂ ತಿಳಿಯದೆ, ನೆಟ್ಟಗೆ ಅವನನ್ನನುಸರಿಸಿ ನಡೆದಳು. ಡಾಕ್ಟರನು ಅವಳೊಡನೆ ಆ ಹಾಟೆಲದೊಳಗಿನ ಒಂದು ಚಿಕ್ಕ ಪುಷ್ಪವಾಟಿಕೆಯಲ್ಲಿ ಹೊಕ್ಕನು ಅಲ್ಲಿಯ ಒಂದು ಲತಾಮಂಟಪದ ಕೆಳಗಿದ್ದ ಒಂದು ಕೋಚದ ಮೇಲೆ ಅವರೀರ್ವರೂ ಕುಳಿತುಕೊಂಡರು. ಆ ಸ್ಥಳದಲ್ಲಿ ಚಿತ್ತಾಕರ್ಷಕವಾದ ಹೂಬಳ್ಳಿಯ ದೃಶ್ಯಗಳಿದ್ದವಲ್ಲದೆ, ವಿದ್ಯುತ್ತಿನ ಸಹಾಯದಿಂದ ಅಲ್ಲಿ ಸುಗಂಧಮಿಶ್ರಿತ ತಂಗಾಳಿಯು ಸುಳಿಯುವ ವ್ಯವಸ್ಥೆ ಮಾಡಲ್ಪಟ್ಟಿತ್ತು. ಆದರಿಂದ ಆ ಸ್ಥಳವನ್ನು ಪ್ರವೇಶಿಸಿದ ಎಂತೆಂಥ ವಿಚಕ್ಷಣ ಸ್ವಭಾವದ, ದೇಶವಿದೇಶಗಳನ್ನು ಹತ್ತೆಂಟುಸಾರೆ ತಿರುಗಿ ಬಂದಂಥವರ ಚಿತ್ತವೇ ಹರಣವಾಗುತ್ತಿರಲು, ಸರಸಕ್ಕನಂತಹ ಕೇವಲ ಹಳ್ಳಿಯ ಮನುಷ್ಯಳು ಆ ಸೊಬಗಿನಿಂದ ಮುಂದುಗಾಣದಾದಳೆಂದು ಹೇಳಿದರೆ ಅತಿಶಯೋಕ್ತಿಯೆನಿಸದು. ಆ ಸ್ಥಳದಲ್ಲಿ ತುಸ ಮಿನಿಟುಗಳವರೆಗೆ ವಿಶ್ರಮಿಸುತ್ತಿರಲು, ಡಾಕ್ಟರನು ಪಕ್ಕದ ಟೆಲಿಫೋನಿನ ಗಂಟೆಬಾರಿಸಿ, ಬಾಯಿಗೆ ಯಂತ್ರವನ್ನು ಹಿಡಿದು, "ಹ್ಯಾಲೊ-ಹ್ಯಾಲೊ ನಮಗೆ ಎರಡು ಥಂಡಾ ಲೇಮನ್ ಕಳಿಸು" ಎಂದು ಅಪ್ಪಣೆ ಮಾಡಿದನು. ಮುಂದೆ ತುಸ ಸೆಕಂದುಗಳಲ್ಲಿಯೇ

ಭರ್ಫಹಾಕಿದ ಎರಡು ಲಿಮನೆಡ್ಡಿನ ಗ್ಲಾಸುಗಳನ್ನು ಒಬ್ಬ ಬಾಯನು ತಂದು ಅವರೆದುರಿಗಿನ ಸ್ಫಟಿಕದ ಮೇಜಿನ ಮೇಲಿಟ್ಟುಹೋದನು. ಡಾಕ್ಟರನ ಮನಸ್ಸಿನಲ್ಲಿ ಆಗ ಲೇಮನ್ನಿನಬದಲು ಕೆಂಪುಬಣ್ಣದ ಮತ್ತಾವ ಗ್ಲಾಸುಗಳನ್ನೋ ತರಿಸುವದಿದ್ದಿತು; ಆದರೆ ಇಂದೇ ಆ ಪಾನವು ತಕ್ಕದ್ದಲ್ಲವೆಂದು ಅವನು ಅದನ್ನು ತರಿಸಲಿಲ್ಲ.

ತಂಪಾದ ಪೇಯವನ್ನು ಮನಸೋಕ್ತ ಕುಡಿದನಂತರ ಆಪರೀರ್ವರೂ ಬಂದು ಪುನಃ ಮೋಟಾರನ್ನು ಆರೋಹಿಸಿದರು. ಆ ಕೂಡಲೆ ಡ್ರಾಯವ್ಹರನು ಬಂದ ದಾರಿಯಿಂದ ಮೋಟಾರನ್ನು ಹಿಂದಿರುಗಿಸಿಕೊಂಡು ಹೋಗದೆ, ಮತ್ತಷ್ಟು ಸುತ್ತಿನ ದಾರಿಯನ್ನು ಹಿಡಿದನು. ಕಾರಣವೇನಂದರೆ, ಮುಂಬಯಿಯಂಥ ಪಟ್ಟಣಗಳಲ್ಲಿಯ ಮೋಟಾರುಗಳಲ್ಲಿ ಯಾವವು ಬಾಡಿಗೆಗೆಂದು ಗೊತ್ತುಮಾಡಲ್ಪಟ್ಟಿರುತ್ತವೆಯೋ ಅವುಗಳು ಸ್ಟಾಂಡಿನಲ್ಲಿ (ನಿಲ್ಲತಕ್ಕ ನಿಯಮಿತ ಸ್ಥಳದಲ್ಲಿ) ನಿಂತಿರುವಾಗ ಯಾರು ಕರೆದರೂ ಬಾಡಿಗೆಗೆ ಹೋಗಲೇಬೇಕೆಂಬ ನಿರ್ಬಂಧವಿರುತ್ತದೆ. ಸ್ಟಾಂಡಿನಲ್ಲಿ ನಿಂತಂಥ ಯಾವುದೊಂದು ಟ್ಯಾಕ್ಸಿ (ಬಾಡಿಗೆಯ ಮೋಟಾರಬಂಡಿ)ಯು ನಿಷ್ಕಾರಣವಾಗಿ ಬಾಡಿಗೆಗೆ ಬರಲಿಲ್ಲವೆಂಬದುಸಿದ್ಧವಾದರೆ ಆದರ ಮಾಲಿಕನಿಗೆ ದಂಡವಾಗುತ್ತದೆ. ಕರೆದ ಬಾಡಿಗೆಯ ಮೋಟಾರುಗಳ ಬಾಡಿಗೆಯನ್ನು ಅಲ್ಲಿ ಇಂತಿಷ್ಟೆಂದು ಕರಾರುಮಾಡುವ ಕಾರಣವಿಲ್ಲ. ಬಾಡಿಗೆಯ ಮೋಟಾರಿನಲ್ಲಿ ಎಡಮಗ್ಗಲು ಒಂದು ಮೈಲಿನ ಗೇಜವಿರುತ್ತದೆ. ಬಾಡಿಗೆ ಮಾಡಿದವರು ಮೋಟಾರಿನಲ್ಲಿ ಏರುವಾಗ ಡ್ರಾಯವ್ಹರನಿಂದ ಆ ಗೇಜಯಂತ್ರದ ಮುಳ್ಳನ್ನು (0) ಶೂನ್ಯಸ್ಥಾನಕ್ಕೆ ಪರಿಸರಿಸಲು ಮರೆಯಬಾರದು. ಬಳಿಕ ಆ ಮೋಟಾರು ಎಷ್ಟು ದೂರ ಪ್ರವಾಸ ಮಾಡುವದೋ ಅಷ್ಟು ಮೈಲುಗಳೂ, ಅಪೂರ್ಣ ಮೈಲುಗಳ ಅಂಶಗಳೂ ಆ ಗೇಜಿನಲ್ಲಿ ಕಂಡುಬರುತ್ತವೆ. ಒಂದು ಪೂರ್ಣಮೈಲು ಅಥವಾ ಅದಕ್ಕೂ ಕಡಿಮೆ ಪ್ರವಾಸದ ಬಗ್ಗೆ ಒಂದು ಸಂಪೂರ್ಣ ಮೋಟಾರುಕಾರಿಗೆ ಎಂಟು ಆಣೆಯಂತೆಯೂ, ಮುಂದಿನ ಅಪೂರ್ಣ ಮೈಲುಗಳಿಗೂ ಅಷ್ಟೇ ಹಾಸಲೂ ಕೊಡಬೇಕಾಗುತ್ತದೆ. ಅದರ ಹೊರತು ಪ್ರವಾಸಿಕರ ಸೌಕರ್ಯಕ್ಕಾಗಿ ನಡುವೆ ಎಲ್ಲಿಯಾದರೂ ನಿಲ್ಲಿಸಬೇಕಾದರೆ, ಆ ನಿಲ್ಲಿಸಿದ ವೇಳೆಯ ಬಗ್ಗೆ ಕೊಡುವ ಚಾರ್ಜಿನ ನಿಯಮವಿದೆ. ಅಂತೇ ನಮ್ಮ ಸರಸಕ್ಕ ಹಾಗು ಡಾಕ್ಟರರು ಕುಳಿತ ಬಾಡಿಗೆಯ ಮೋಟಾರಿನ ಶಾಫರನು

ಅದನ್ನು ಶಕ್ಯವಿದ್ದಷ್ಟು ಹೆಚ್ಚು ದೂರ ಸುತ್ತುವರಿಸಿಕೊಂಡು ಗೇಟೀಥಿಯೇಟರಿಗೆ ನಡಿಸಿದ್ದನು.

ಮೋಟಾರಬಂಡಿಯು ನಾಟಕಗೃಹದ ಬಳಿಗೆ ಬಂದಾಗ ಮೂರಕ್ಕೆ ಐದೇ ನಿಮಿಷಗಳು ಉಳಿದಿದ್ದವು. ಸರಿಯಾಗಿ ಮೂರಕ್ಕೆ ಅಂದಿನ ಆ ಸಂಘಯುಕ್ತ ನಾಟಕವು ಪ್ರಾರಂಭವಾಗುವದಿದ್ದಿತು. ಥಿಯೇಟರಿನಲ್ಲಿ ಹೆಚ್ಚಾಗಿ ಜನರು ಕಲೆತಿದ್ದುದರಿಂದ, ಒಳಗಿನವರ ಗದ್ದಲದ ಸಪ್ಪಳವು ಹೊರಗಿದ್ದವರಿಗೆ ಗಟ್ಟಿಗಟ್ಟಿಯಾಗಿ ಕೇಳಿಸುತಲಿತ್ತು. ಇಂಥ ಸಮಯದಲ್ಲಿ ನಮ್ಮ ಡಾಕ್ಟರನು ಸರಸಕ್ಕನೊಡನೆ ತಮ್ಮ ರಿಝರ್ವಬಾಕ್ಸಿನಲ್ಲಿ ಒಮ್ಮೆ ಹೋಗಿ ಕುಳಿತನು. ಅಷ್ಟರಲ್ಲಿ ನಾಟಕದ ಸೂಚನೆಯ ಫರ್ಸ್ಟ ಬೇಲ್ ಆಯಿತು. ಕಲೆತ ಜನರೆಲ್ಲ ಎದುರಿಗಿನ ನಾಟಕದ—ರಂಗಭೂಮಿಯ ದೃಶ್ಯಪರದೆಯು ಯಾವಾಗ ಮೇಲಕ್ಕೇರುವದೋ, ಒಳಗಿನ ಸೀನು-ಸೀನರಿಗಳು ಯಾವಾಗ ತಮ್ಮ ಕಣ್ಣಿಗೆ ಕಾಣುವವೋ ಎಂದು ಮೌನದಿಂದ ಟಕಮಕ ನೋಡುತಲಿದ್ದರು.

ತುಸ ಹೊತ್ತಿನಲ್ಲಿ ಸೆಕಂಡ ಬೇಲ್ ಆಯಿತು; ಹಾಗು ದೃಶ್ಯಪರದೆಯೂ ಮೇಲಕ್ಕೆ ಹೋಯಿತು. ಅದರ ಹಿಂದೊಂದು ನಯನಮನೋಹರವಾದ ಪಡದೆಯು ಇಳಿಬಿಟ್ಟದ್ದು, ಅದರಮೇಲೆ ಅಂದಿನ ನಾಟಕವನ್ನು ಅಭಿನಯಿಸತಕ್ಕಲಿರುವ ಪ್ರಸಿದ್ಧ ನಟರುಗಳ ಸುಮನೋಹರ ಚಿತ್ರಗಳು ರೇಖಿಸಲ್ಪಟ್ಟಿದ್ದವು. ಆ ಒಳಗಿನ ಪರದೆಯನ್ನು ನೋಡಿಯೇ ಎಷ್ಟೋ ಜನರು ತಾವಿಂದು ಧನ್ಯರಾದೆವೆಂದು ತಿಳಕೊಂಡರು. ಬಹು ಜನರು ಆ ಪರದೆಯ ಮೇಲಿನ ಚಿತ್ರಗಳೇ ಅಂದಿನ ನಾಟಕದೊಳಗಿನ ಪ್ರತ್ಯಕ್ಷ ನಟರೆಂದು ಭಾವಿಸಿದ್ದರು. ಅಷ್ಟರಲ್ಲಿ ಆ ಪರದೆಯೂ ಮಾಯವಾಗಿ ಒಬ್ಬ ನವತರುಣೆಯು ತನ್ನ ವೃದ್ಧಪತಿಯೊಡನೆ ಆ ರಂಗಭೂಮಿಯನ್ನು ಪ್ರವೇಶಿಸಿದಳು.

ವಿಷಮವಿವಾಹ ನಾಟಕವು ನಮ್ಮ ಕನ್ನಡಿಗರಿಗೇನೂ ಅರಿದಲ್ಲ. ಅದರಿಂದ ಅದರೊಳಗಿನ ಪಾತ್ರಗಳ ವಿಷಯವಾಗಿ ಇಲ್ಲಿ ವಿವೇಚಿಸುತ್ತ ಕೂಡ್ರದೆ, ಆ ನಾಟಕ ನೋಡೋಣದರಿಂದ ನಮ್ಮ ಕಥಾನಾಯಕಿಯಾದ ಸರಸಕ್ಕನ ಮನಸ್ಸಿನ ಮೇಲೆ ಏನು ಪರಿಣಾಮವಾಯಿತೆಂಬದಿಷ್ಟನ್ನೇ ಇಲ್ಲಿ ಹೇಳುವೆವು.

ವಿಷಮವಿವಾಹ ನಾಟಕವು ಹೆಸರಿಗೆ ತಕ್ಕಂತೆ ಇದ್ದು, ಸಮಾಜದಲ್ಲಿ ಒಳ್ಳೇ ಜಾಗ್ರತಿಯನ್ನುಂಟುಮಾಡತಕ್ಕಂತಹದಿರುತ್ತದೆ. ಅದರಲ್ಲಿ ಅಂದು ಆ ನಾಟಕವನ್ನು ಪ್ರಸಿದ್ಧ ಕನ್ನಡ ಹಾಗು ಮರಾಠೀ ನಟರು ಕೂಡಿ ಅಭಿನಯಿಸಿದ್ದರು. ಅಂದಮೇಲೆ ಅದು ಎಷ್ಟು ಉತ್ಕೃಷ್ಟವಾಗಿ ಸಮಾಜ ಜಾಗ್ರತಿಯ ತನ್ನ ಕೆಲಸ ಮಾಡಿರಬಹುದೆಂಬದನ್ನು ಬರೆದು ತಿಳಿಸುವ ಕಾರಣವಿಲ್ಲ. ಅಂದಿನ ಆ ನಾಟಕಕ್ಕೆ ವಿಷಮವಿವಾಹದ ದಂಪತಿಗಳನ್ನು ಳಿದು ಬೇರೆ ಯುವಕ ಯುವತಿಯರೂ, ಪ್ರೌಢರೂ ಕಲೆತಿದ್ದರು. ಇಲ್ಲಿನ್ನ ಲಿಕ್ಕೆ ನಮ್ಮ ಸರಸಕ್ಕನಂತಹ ಕೆಲಕೆಲವು ಜನ ವಿಷಮವಿವಾಹಸ್ಥ ಯುವತಿಯರೂ, ಕೆಲಜನ ಎರಡನೇ ಮೂರನೇ ಹೆಂಡಂದಿರ ವೃದ್ಧ ಪತಿಗಳೂ ಆ ಆ ನಾಟಕಗೃಹದಲ್ಲಿ ಅಲ್ಲಲ್ಲಿ ಮಿನುಗುತ್ತಿದ್ದರು.

ನಾಟಕವು ನಡೆದಾಗ ಪ್ರೇಕ್ಷಕರು ತಮ್ಮ ಪರಿಚಯದ ಅಂಥ ಯಾವುದೊಂದು ಸ್ತ್ರೀಯಾಗಲಿ-ಪುರುಷನಾಗಲಿ ಅಂದಿನ ಆ ನಾಟಕಕ್ಕೆ ಬಂದದ್ದನ್ನು ಕಂಡಿದ್ದರೆ ಅತ್ತಕಡೆಗೇ ಬೊಟ್ಟುಮಾಡಿ ಮಾಡಿ ತಮ್ಮ ಸಂಗಡಿಗರೆದುರಿಗೆ ಆ ನಾಟಕದೊಳಗಿನ ಪಾತ್ರಗಳಿಗೂ ಆ ಪ್ರತ್ಯಕ್ಷ ಪಾತ್ರಗಳಿಗೂ ಹೋಲಿಸಿ ತೋರಿಸುತ್ತಿದ್ದರು. ಆದರಿಂದ ಉಳಿದವರಿಗಿಂತ ಆ ವಿಷಮವಿವಾಹಸ್ಥ ವ್ಯಕ್ತಿಗಳ ಮನಸ್ಸಿನಮೇಲೆ ಅಂದಿನ ಆ ನಾಟಕದ ಪರಿಣಾಮವು ಚೆನ್ನಾಗಿ ಆಗುತ್ತಿತ್ತು.

ಸರಸಕ್ಕನು ಡಾಕ್ಟರನೊಡನೆ ಒಂದು ರಿಝರ್ವ ಬಾಕ್ಸಿನಲ್ಲಿ ಕುಳಿತುಕೊಂಡು ನಾಟಕ ನೋಡುತ್ತಿದ್ದಳಷ್ಟೇ; ಬಾಕ್ಸಿನ (ಪೆಟ್ಟಿಗೆಯ) ಮೂರೂ ಮಗ್ಗಲು ಹಲಿಗೆಗಳಿದ್ದು, ರಂಗಭೂಮಿಯ ಕಡೆಗೆ ಅದರ ಬಾಗಿಲವಿದ್ದಿತು. ಅದರಿಂದ ಇತರ ಪ್ರೇಕ್ಷಕ ಗಣಗಳ ದೃಷ್ಟಿಯು ಸರಸಕ್ಕನ ಮೇಲಾಗಲಿ, ಸರಸಕ್ಕನ ನಜರು ರಂಗಭೂಮಿಯ ಹೊರತು ಇತರ ಪ್ರೇಕ್ಷಕರ ಕಡೆಗಾಗಲಿ ಹೊರಳುವಂತಿರಲಿಲ್ಲಾದ್ದರಿಂದ ಅವಳು ಆ ಜನರ ಹುಡುಗಾಟಿಕೆಗೆ ಬಲಿಯಾಗದೆ ಸ್ವಸ್ಥಚಿತ್ತದಿಂದ ನಾಟಕವನ್ನು ನೋಡುತ್ತಿದ್ದಳು.

ಆದರೆ ಅವಳ ಪಕ್ಕದಲ್ಲಿ ಕುಳಿತ ಡಾ.ರಂಗರಾಯನ ಮನಃಸ್ಥಿತಿಯು ಇದಕ್ಕೆ ತೀರ ವಿಪರೀತವಾಗಿತ್ತು. ಅವನ ಲಕ್ಷ್ಯವೆಲ್ಲ ಸರಸಕ್ಕನ ಮುಖಭಾವದ ಕಡೆಗೇ ಇದ್ದಿತು. ಇಷ್ಟು ಹತ್ತರ ಕುಳಿತು, ಇಷ್ಟು ಹೊತ್ತಿನವರೆಗೆ ಸರಸಕ್ಕನನ್ನು ಒಂದೇಸವನೆ ನೋಡುವ ಸಂಧಿಯು ಅವನಿಗೆ ಈ

ಮೊದಲಿಂದೂ ಲಭಿಸಿರಲಿಲ್ಲ. ಇಂದು ಅದು ಪ್ರಾಪ್ತವಾದುದರಿಂದ ಅವನು ಅದರ ಉಪಯೋಗವನ್ನು ಚೆನ್ನಾಗಿ ಮಾಡಿಕೊಳ್ಳುತ್ತಿದ್ದನು. ಮತ್ತೆ ಇಂಥ ಸುಯೋಗವು ದೊರಕುವದೋ ಇಲ್ಲವೊ ಎಂಬದನ್ನು ಊಹಿಸಲು ಕೂಡ ಸಮರ್ಥನಾಗದೆ ಅವನು ಅವಳನ್ನು ಟಕಮಕ ನೋಡುತ್ತ ಮನಸ್ಸಿನಲ್ಲಿ ಏನೇನೋ ಆಲೋಚಿಸುತ್ತಿದ್ದನು.

"ಇನ್ನು ಇವಳು ನನ್ನನ್ನು ಬಿಟ್ಟು ಹೋಗುವದೆಲ್ಲಿ? ಛೀ, ಆ ದುಷ್ಟ ಕಲ್ಪನೆಯಾದರೂ ನನ್ನ ಮನಸ್ಸಿನಲ್ಲಿ ಏಕೆ ಬರಬೇಕು? ಈಕೆಯು ನನ್ನನ್ನಗಲಿ ಹೋಗಲಾರಳೆಂಬದು ಖಂಡಿತವು. ಯಾಕೆಂದರೆ, ಹೆಂಗಸರು ವಶರಾಗುವದೊಂದೇ ಕಠಿಣ. ಒಮ್ಮೆ ಇವಳು ವಶಳಾದಳೆಂದರೆ, ಒಂದು ಸಾರೆ ಇವಳು ನನ್ನ ಬಲಿಗೆ ಬಿದ್ದಳೆಂದರೆ, ಒಂದೇ ಸಾರೆ ಯಾಕಾಗಲೊಲ್ಲದು ಇವಳು ಚಾರಿತ್ರ್ಯಹೀನಳಾದಳೆಂದರೆ, ಒಮ್ಮೆಯೇ ಇವಳು ಅಡ್ಡದಾರಿಗೆ ಬಿದ್ದಳೆಂದರೆ ತೀರಿತು; ಬಳಿಕ ಇವಳು ನನ್ನವಳೇ ಆಗಿ ಉಳಿಯುವಳು. ನಂತರ ನಾನು ಬೇಡ ಬೇಡೆಂದರೂ-ದಬ್ಬಿದರೂ ಕೂಡ ಇವಳು ನನ್ನನ್ನು ಬಿಟ್ಟು ಹೋಗಲಾರಳು;" ಎಂದು ಯೋಚಿಸುತ್ತ ಡಾಕ್ಟರನು ಎದ್ದು ನಿಂತನು. ಅವನಿಗೆ ಈಗ ಹೊಸ ಹುರುಪು ಬಂದಂತಾಗಿತ್ತು. ಅವನು ಸರಸಕ್ಕನ ಕಡೆಗೆ ಹೆಚ್ಚು ಧೈರ್ಯದಿಂದ ನೋಡಹತ್ತಿದನು. ಇಷ್ಟೊತ್ತಿನವರೆಗೆ ಅವನು ಅವಳನ್ನು ಪರಸ್ತ್ರೀಯೆಂದು ಸಂಕುಚಿತ ದೃಷ್ಟಿಯಿಂದ ನಿರೀಕ್ಷಿಸುತಲಿದ್ದನು. ಆದರೆ ಈಗ ಅವನು ಆತ್ಮೀಯ ಭಾವದಿಂದ ಅವಳ ಕಡೆಗೆ ನೋಡಹತ್ತಿದನು. ಕ್ಷಣಾರ್ಧದಲ್ಲಿ ಅವನ ದೃಷ್ಟಿಕೋನದಲ್ಲಿ ಹೆಚ್ಚು ಕಡಿಮೆಯಾಯಿತು. ಆಗ ಡಾ. ರಂಗರಾಯನು ಸರಸಕ್ಕನ ಕಡೆಗೆ ಎವೆಯಿಕ್ಕದೆ ನೋಡುತ್ತಿರುವದನ್ನು ಯಾರಾದರೂ ಕಂಡಿದ್ದರೆ, ಯಾವನೊಬ್ಬನು ತನ್ನ ಮದುವೆಯ ಹೆಂಡತಿಯನ್ನು ಕೂಡ ಅಷ್ಟೊಂದು ಆತ್ಮೀಯ ಭಾವದಿಂದ ಸಹಸಾ ನೋಡಲಿಕ್ಕಿಲ್ಲೆಂದು ಅನ್ನದೆ ಇರುತ್ತಿರಲಿಲ್ಲ.

ಆದರೆ ರಂಗನಾಥರಾಯನ ಆ ಉಲ್ಲೂತನವನ್ನು ನೋಡಲಿಕ್ಕೆ ಯಾರ ಲಕ್ಷ್ಯವೂ ಅವನ ಕಡೆಗೆ ಇರದಿದ್ದದ್ದೇ ವಿಹಿತವಾಯಿತು. ಇಲ್ಲೆನ್ನಲಿಕ್ಕೆ ಒಂದು ವ್ಯಕ್ತಿಯು—ಒಂದೇ ಒಂದು ವ್ಯಕ್ತಿಯು—ನಾಟಕದ ಪ್ರಾರಂಭದಿಂದಲೂ ಇವರ ಕಡೆಗೆ ಎವೆಯಿಕ್ಕದೆ ನೋಡುತ್ತಲಿತ್ತು. ಯಾವ ಕಾರಣದಿಂದಲೋ ಆ ವ್ಯಕ್ತಿಯು ನಾಟಕಾರಂಭದಿಂದಲೂ ಡಾಕ್ಟರ

ರಂಗರಾಯನು ರಿಝರ್ವ ಮಾಡಿಸಿಟ್ಟಿದ್ದ ಬಾಕ್ಸಿನ ಎದುರಿಗಿನ ಮೇಲಂತಸ್ತಿನ ಸಂದಿಯ ಸ್ಥಳದಲ್ಲಿ-ದುಡ್ಡುಕೊಟ್ಟು ನಾಟಕ ನೋಡಲಿಕ್ಕೆ ಬಂದವರು ಸಹಸಾ ಕೂಡ್ರದಿರುವ ಆ ಸ್ಥಳದಲ್ಲಿ-ಕುಳಿತು ಇವರೀರ್ವರ ಕಡೆಗೆ ಟಕಮಕ ನೋಡುತಲಿತ್ತು. ಆ ವ್ಯಕ್ತಿಯು ಒಮ್ಮೊಮ್ಮೆ ಕಿಡಿಗಣ್ಣಿನಿಂದ ಸರಸಕ್ಕನ ಕಡೆಗೆ ನೋಡುತ್ತಿದ್ದರೆ, ಮತ್ತೊಮ್ಮೆ ಆತ್ಮೀಯ-ಆದರೆ ಕೇವಲ ತುಚ್ಛಭಾವದಿಂದ ಅವಳ ಕಡೆಗೆ ನೋಡುತ್ತಿತ್ತು. ಆದರೆ ರಂಗರಾಯನನ್ನು ಮಾತ್ರ ಅದು ಕೆಕ್ಕರಗಣ್ಣಿನಿಂದ ಆಗಾಗ್ಗೆ ನಿರೀಕ್ಷಿಸುತ್ತಿತ್ತು; ಹಾಗು ತನ್ನ ಸಿಟ್ಟನ್ನು ಒಳ್ಳೇ ಕಷ್ಟದಿಂದ ನುಂಗಿಕೊಳ್ಳುತ್ತಿತ್ತು. ವಾಚಕರೇ, ಆ ವ್ಯಕ್ತಿಯು ಯಾರಿರಬೇಕು? ಅಷ್ಟು ಸಿಟ್ಟಿನಿಂದ ಅವರೀರ್ವರನ್ನು ಒಂದೇ ಸವನೆ ನೋಡುತ್ತ ಆ ಸಂದಿಯಲ್ಲಿ ಕುಳಿತ ಆ ಮನುಷ್ಯನಾರಿರಬೇಕು? ತಿಳಿಯಿತೇನು, ಅವರು-ಅವಳ, ಆ ನಮ್ಮ ಸರಸಕ್ಕನ ವೃದ್ಧ ಪತಿಗಳಾದ ನರಸನಗೌಡರಲ್ಲದೆ ಮತ್ತಾರಿರುವರು? ಛೇ-ಛೇ ಅವರು ಇಂದು ನಾಟಕಕ್ಕೇಕೆ ಬಂದರು? ಬಂದರೂ ಒಬ್ಬೊಂಟಿಗರಾಗಿ ಬಂದು ಡಾ. ರಂಗರಾಯನು ರಿಝರ್ವ ಮಾಡಿಸಿಟ್ಟಿದ್ದ ಆ ಬಾಕ್ಸಿನ ಎದುರಿಗೇಕೆ ಬಂದು ಕುಳಿತರು?

ಪ್ರಿಯವಾಚಕರೇ, ನರಸನಗೌಡನಾದರೂ ನಾಟಕಾರಂಭದಿಂದಲೇ ಅಲ್ಲಿಗೆ ಬಂದು ಕುಳಿತಿದ್ದನು. ರವಿವಾರವಿದ್ದರೂ ಅವನು ವಿಶೇಷ ಕೆಲಸದ ಸಲುವಾಗಿ ಅಂದು ಬೆಳಿಗ್ಗೆ ೧೦ ಗಂಟೆಗೆ ಕಚೇರಿಗೆ ಹೋಗಿದ್ದನು; ಆದರೆ ಅಲ್ಲಿಯ ಜರೂರಿಯ ಕೆಲಸದ ನಂತರ ಆ ಕಚೇರಿಯ ಮುಖ್ಯಸ್ಥನು-ಸಾಹೇಬನು ನರಸನಗೌಡನ ನಿರಸಲತೆಯನ್ನೂ, ರವಿವಾರವಾದರೂ ಬೇರೆಯವರಂತೆ ಏನೊಂದೂ ನೆವಮುಂದುಮಾಡದೆ ಬಂದುದನ್ನೂ ನೆನೆದು ಅವನ ವಿಷಯವಾಗಿ ಕನಿಕರಪಟ್ಟನು. ಅಷ್ಟರಲ್ಲಿ ಆ ಸಾಹೇಬನ ಹೆಸರಿಗೆ ಅಂದಿನ ಆ ಅಪೂರ್ವ ಸಂಯುಕ್ತ ನಾಟಕಕ್ಕೆ ಬರಲಿಕ್ಕೆ ನಿಮಂತ್ರಣವೂ, ಆದರೊಡನೆ ಒಂದೆರಡು ಪ್ಯಾಸುಗಳೂ ಟಪಾಲಿನಿಂದ ಬಂದವು. ಕೂಡಲೆ ಆ ವರಿಷ್ಠನು ನರಸನಗೌಡನನ್ನು ಹತ್ತರ ಕರೆದು—ಗೌಡರೇ, ನೀವು ಇಂದಿನ ಸಂಯುಕ್ತ ನಾಟಕಕ್ಕೆ ಹೋಗುವಿರೇನು? ಎಂದು ಕೇಳಿದನು. ಆ ಪ್ರಶ್ನೆಯನ್ನು ಕೇಳಿ ನರಸನಗೌಡರಿಗೆ ಆಶ್ಚರ್ಯವೆನಿಸಿತು. ಆ ನಾಟಕಗೃಹದಲ್ಲಿ ಈ ಕಲಪಸಿಯ ಕೆಲಸವೇನಿರಬಹುದೆಂಬದು ಅವನಿಗೆ ತಿಳಿಯ

ದಾಯಿತು. ಆ ಗೇಟೀ ಥಿಏಟರಿನಲ್ಲಿ ಇಂದು ಸಂಯುಕ್ತ ಕಂಪನಿಗಳ ವಿಷಮವಿವಾಹ ನಾಟಕವಿರುವದೆಂಬದು ಅವನಿಗೆ ಗೊತ್ತೇ ಇದ್ದಿಲ್ಲ. ಆತನು ತನ್ನ ಕಚೇರಿಯ ಕೆಲಸವೇನೋ ತಾನೇನೋ ಈ ಪ್ರಕಾರದ ಸರಳ ಮನುಷ್ಯನು; ಆ ಕಚೇರಿಯ ಉಳಿದ ನೌಕರರು ನಾನಾ ಬಗೆಯ ನೆವ ಮುಂದು ಮಾಡಿ ಸಿಕ್ಕಷ್ಟು ಹೆಚ್ಚು ದಿನಗಳ ರಜೆಯನ್ನು ಅನುಭವಿಸುತ್ತಿದ್ದರು; ಆದರೆ ನರಸನಗೌಡನು ತನ್ನ ದ್ವಿತೀಯವಿವಾಹದ ಕಾಲಕ್ಕೆ ಯಾವ ಎಂಟು ದಿನಗಳ ರಜೆ ಪಡಕೊಂಡಿದ್ದನೋ, ಅದೇ ಆತನ ನೌಕರಿಯೊಳಗಿನ ದೀರ್ಘಕಾಲದ ರಜೆಯಾಗಿದ್ದಿತು; ಇರಲಿ

ನರಸನಗೌಡನು ಕಚೇರಿಯ ಕೆಲಸದಲ್ಲಿ ಪ್ರಾಮಾಣಿಕನೂ, ಸರಳ ಸ್ವಭಾವದವನೂ ಆಗಿದ್ದದರಿಂದ ಅವನಮೇಲೆ ವರಿಷ್ಠರ ಮರ್ಜಿಯಿತ್ತು. ಅಂತೇ ಆ ವರಿಷ್ಠನು ಯಾವನೊಬ್ಬ ವ್ಯಾಪಾರಿಯಿಂದ ತನಗೆ ಬಂದ ಒಂದು ಪ್ಯಾಸನ್ನು ನರಸನಗೌಡನಿಗೆ ಕೊಟ್ಟು ಅಂದು ನಾಟಕಕ್ಕೆ ಕಳಿಸಿದ್ದನು. ಸ್ವಂತದ ಸಲುವಾಗಿರದಿದ್ದರೂ, ತಮ್ಮ ವರಿಷ್ಠರ ಭಿಡೆ-ಮುರವತ್ತಿಗಾಗಿ ಆವನು ಅಂದು ಆ ವಿಷಮವಿವಾಹ ನಾಟಕಕ್ಕೆ ಬಂದಿದ್ದನು. ಅವನು ಅಂದು ಮನೆಗೆ ಹೋಗದೆ ಕಚೇರಿಯಿಂದ ನೆಟ್ಟಗೆ ಥಿಏಟರಿಗೆ ಬಂದನು. ಅವನು ಅಲ್ಲಿಗೆ ಬರುವಷ್ಟರಲ್ಲಿ ನಾಟಕಗೃಹದೊಳಗೆ ಬಹು ಜನ ಪ್ರೇಕ್ಷಕರು ಕಲೆತಿದ್ದು, ಇನ್ನು ತುಸ ಹೊತ್ತಿನಲ್ಲಿಯೇ ಆಟವು ಪ್ರಾರಂಭವಾಗತಕ್ಕದ್ದಿದ್ದಿತು. ನರಸನಗೌಡನು ಥಿಯೇಟರದ ಬಾಗಿಲಿಗೆ ಬಂದು, ತನ್ನ ಹತ್ತರದ ಪ್ಯಾಸನ್ನು ಅಲ್ಲಿಯ ದ್ವಾರಪಾಲಕನಿಗೆ ತೋರಿಸಿದನು. ಆ ಬಾಗಿಲ ಕಾಯುವವನು ಆ ಭಾರೀಬೆಲೆಯ ಪ್ಯಾಸನ್ನು ನೋಡಿ, ಒಮ್ಮೆ ಆ ನಮ್ಮ ನರಸನಗೌಡನ ಬೆಪ್ಪ ಮುಸುಡಿಯ ಕಡೆಗೆ ನೋಡಿದನು. ನಂತರ ಈ ಪ್ಯಾಸನ್ನು ಇವನು ಸ್ವತಃ ದುಡ್ಡು ಕೊಟ್ಟು ಕೊಂಡಿಲ್ಲವೆಂದೂ, ಯಾರೋ ಈತನಿಗೆ ತಮ್ಮ ಪ್ಯಾಸನ್ನು ಕೊಟ್ಟು ಕಳಿಸಿರುವರೆಂದೂ ತಿಳಕೊಂಡು ಆ ದ್ವಾರಪಾಲಕನು ನರಸನಗೌಡನನ್ನು ಆ ಪ್ಯಾಸಿನಲ್ಲಿ ಬರೆದ ಸ್ಥಳಕ್ಕೆ ಕರೆದೊಯ್ದು ಕೂಡ್ರಿಸದೆ, ಮೇಲಂತಸ್ತಿನಲ್ಲಿಯ ಒಂದು ಸಂದಿಯ ಸ್ಥಳದಲ್ಲಿ ಕೂಡ್ರಿಸಿ, ಅಲ್ಲಿ ಸ್ಥಳವಿರದ್ದರಿಂದ ಇಲ್ಲಿ ಕೂರಿಸಬೇಕಾಯಿತು, ಕ್ಷಮಿಸಿರಿ, ಎಂದು ಹೇಳಿ ಹೋದನು.

ನರಸನಗೌಡನು ಮುಂಬಯಿಯಲ್ಲಿ ಬಹಳ ವರ್ಷಗಳಿಂದ ವಾಸಿಸು ತ್ತಿದ್ದರೂ, ಅವನು ಸಹಸಾ ನಾಟಕ-ಸಿನೇಮಾಗಳಿಗೆ ಹೋಗುತ್ತಿದ್ದಿಲ್ಲ. ಆದರಿಂದ ಅಂದು ಅವನು ಆಕಸ್ಮಿಕವಾಗಿ ಆ ಭವ್ಯವಾದ ಗೇಟೇಥಿಯೇಟ ರನ್ನು ಪ್ರವೇಶಿಸಿ ನಾಟಕ ನೋಡಹೋದಕೂಡಲೆ ಅವನಿಗೆ ಹೇಗೆ ಹೇಗೋ ಅನಿಸಿತು. ಹುಟ್ಟು ಬೆಪ್ಪುಸ್ವಭಾವದ ಜನರು ಎಷ್ಟು ಹುಷಾರಾದ ರೇನು? ಎಂಥ ಹುದ್ದೆಯ ಕೆಲಸ ಮಾಡಿದರೇನು? ಎಷ್ಟು ದೊಡ್ಡ ಪಟ್ಟಣದಲ್ಲಿ ವಾಸಿಸಿದರೇನು? ಮುತ್ತಲ ಗಿಡವು ಮಲೆನಾಡನ್ನು ಬಿಟ್ಟು ಬೆಳವಲುನಾಡಿಗೆ ಹೋದರೂ ಅದಕ್ಕೆ.ಮೂರೇ ಎಲೆಗಳು, ಎಂಬಂತೆ ನರ ಸನಗೌಡನ ಸ್ಥಿತಿಯಿದ್ದದರಿಂದ ಆತನು ನಾಟಕಗೃಹವನ್ನು ಪ್ರವೇಶಿಸಿದ ಕೆಲ ನಿಮಿಷಗಳವರೆಗೆ ತನ್ನ ಸ್ಥಳದಲ್ಲಿ ಸಂಕೋಚವೃತ್ತಿಯಿಂದ ಕುಳಿತು ಅತ್ತಿತ್ತ ಬೆಪ್ಪನಂತೆ ಟಕಮಕ ನೋಡಹತ್ತಿದನು; ಅಲ್ಲ-ಅಲ್ಲ, ಗಂಡನೆದು ರಿಗೆ ಹೊಸಮದುವಣಗಿತ್ತಿಯು ಬೆದರುವಂತೆ ಬೆದರುತ್ತಿದ್ದನು!

ಡಾ. ರಂಗನಾಥರಾಯನು ಸರಸಕ್ಕನೊಡನೆ ಕುಳಿತ ಬಾಕ್ಸು ಕರ್ಮ ಧರ್ಮಸಂಯೋಗದಿಂದ ನರಸನಗೌಡನ ಎದುರಿನಲ್ಲಿಯೇ ಇತ್ತು. ಆದ ರಿಂದ ಪ್ರಯತ್ನಪೂರ್ವಕವಾಗಿ ನೋಡದಿದ್ದರೂ ತನ್ನ ಹೆಂಡತಿಯು ಡಾಕ್ಟರ ನೊಡನೆ ನಾಟಕಕ್ಕೆ ಬಂದುದು ಗೌಡನ ನಜರಿಗೆ ಸಹಜವಾಗಿ ಬಿತ್ತು. ಮೊದಮೊದಲು ಆವಳು ತನ್ನ ಹೆಂಡತಿಯೇ ಎಂಬದು ಅವನಿಗೆ ನಿಜವಾಗಿ ತೋರಲೊಲ್ಲದು; ಆದರೆ ತುಸ ನಿಮಿಷಗಳಲ್ಲಿಯೇ ಅವಳು ತನ್ನ ಹೆಂಡತಿ ಯೇ ಎಂಬದು ನಿರ್ಧರವಾಗಿ, ಅವಳು ಡಾ. ರಂಗರಾಯನೊಡನೆ ನಾಟಕಕ್ಕೆ ಬಂದಿರುವಳೆಂಬದು ಅವನ ಖಾತ್ರಿಯಾಯಿತು. ಆಗ ಅವನು ತನ್ನ ಮನ ಸ್ಸಿನಲ್ಲಿಯೇ,—

“ಎಲೆ, ಇವಳು ನನ್ನ ಹೆಂಡತಿಯೇ ಅಹುದೇನು? ಅಹುದು! ಅವ ನ್ಯಾರು? ಆ ನೀಚನೇ, ಆ ಡಾಕ್ಟರ ರಂಗರಾಯನಲ್ಲವೇ? ಇವರು ಹೀಗೆ ಕುಳಿತಿರುವದನ್ನು ನೋಡಿ ನನ್ನ ರಕ್ತವು ಹೊರಚಿಮ್ಮಹತ್ತಿದೆ. ಬರೇ ಸಿಟ್ಟಾಗಿ ಪ್ರಯೋಜನವೇನು? ನನ್ನ ಹೆಂಡತಿಯೇ ಇವಳಾಗಿದ್ದರೆ, ಇವಳು ಹೀಗೆ ಪರಪುರುಷನೊಡಗೂಡಿ ನಾಟಕಕ್ಕೇಕೆ ಬರುತ್ತಿದ್ದಳು? ಛೀ! ನನ್ನಿಂದ ಇನ್ನು ಸಹಿಸುವದಾಗದು. ಎಂಥ ನೀಚಳಿವಳು? ಎಂಥ ಹೊಲೆಯನಿವನು? ಶಿವ! ಶಿವ!! ಎಂಥ ದುಷ್ಕರ್ಮವಿದು? ಎಲೆ, ನಿಮಗೆ ಶೆಗಣಿಯನ್ನೇ ತಿನ್ನು

ವದಿದ್ದರೆ, ಇಂಥ ಪ್ರಸಿದ್ಧ ಸ್ಥಳದಲ್ಲಾದರೂ ತಿನ್ನತಕ್ಕದ್ದಿದ್ದಿಲ್ಲ. ಈ ವಿಸ್ತೃತವಾದ ಮುಂಬಾಪುರಿಯಲ್ಲಿ ಸಣ್ಣಪುಟ್ಟ ಗಲ್ಲಿಗಳಿಗೇನು ಕಡಿಮೆ? ಹಾಳು ಮನೆಗಳಿಗೂ, ಅವುಗಳಲ್ಲಿಯ ತೆರಪಿದ್ದ ಕೋಣೆಗಳಿಗೂ ಕೊರತೆಯೇನು? ಅಂಥಲ್ಲಿ ಹೋಗಿ ಬಾಗಿಲು ಕಿಟಕಿಗಳನ್ನು ಮುಚ್ಚಿಕೊಂಡು, ಬೇರೆಯವರಿಗೆಲ್ಲದಿದ್ದರೂ ಜಗಜ್ಜ್ಯೋತಿಯಾದ ಸೂರ್ಯನಾರಾಯಣನಿಗಾದರೂ ನಿಮ್ಮ ಪಾಪೀ ಮುಖಗಳನ್ನು ಮರೆಮಾಡಿಕೊಂಡು ಇಂಥ ನೀಚಕೃತ್ಯ ಮಾಡಬಹುದಾಗಿತ್ತು? ಆದರೆ ಈ ನಾಚಿಕೆಗೇಡಿಗಳು ಈ ಬೀದಿಯ ಥೇಟರಿನಲ್ಲಿ ಹೀಗೆ ಮೆರೆಯುತ್ತಿರುವರಲ್ಲಾ! ಥೂ ಇವರ ಮುಸುಡೆಗೆ ಬೆಂಕೀಹಚ್ಚಲಿ!! ವೇಶ್ಯೆ-ವಾರಾಂಗನೆಯರುಕೂಡ ಇವಳ ಈ ಕೃತಿಯನ್ನು ಕಂಡು ತಲೆ ಕೆಳಗೆ ಮಾಡುವಂಥ ಪ್ರಸಂಗ ಬಂದಿದೆ ಅವರು ಹೇಳಿಕೇಳಿ ಹಾದರದ ಕಸಬು ಮಾಡುತ್ತಿದ್ದರೂ, ಇವಳಂತೆ ಒಳಗೊಂದು ಹೊರಗೊಂದು ಬಗೆಯ ವರ್ತನೆವು ಅವರದಿರುವದಿಲ್ಲ...........'' ಎಂದು ನರಸನಗೌಡನು ಮೇಲಟ್ಟದಿಂದ ತನ್ನ ಹೆಂಡತಿಯಕಡೆಗೆ ಕೆಕ್ಕರಗಣ್ಣಿನಿಂದ ನೋಡುತ್ತ ಕುಳಿತಲ್ಲಿಯೇ ತನ್ನಷ್ಟಕ್ಕೆ ತಾನೇ ಒಟಗುಟ್ಟುತ್ತಿದ್ದನು. ತುಸ ಹೊತ್ತಿನಲ್ಲಿ ಆವನ ಮೈಯೊಳಗೆ ತ್ವೇಷದ ಸಂಚಾರವಾಗಲು, ಅವನು,—

''ಏನು, ಈಗಲೆ ಕೆಳಗಿಳಿದು ಹೋಗಿ ಇವರೀರ್ವರ ಗಂಟಲುಗಳನ್ನೂ ಕಡಿಯಲೋ? ನನ್ನಿಂದ ಈ ವರೆಗೂ ಅಂಥ ಕ್ರೂರಕೃತ್ಯಗಳಾಗಿರುವದಿಲ್ಲವೇನೋ ನಿಜವು; ಆದರೆ ಈಗ ನನ್ನಿಂದ ತಡೆಯುವದಾಗುವದಿಲ್ಲ. ಯಾಕೆ, ನಾನು ಕುಳಿತಲ್ಲಿಂದಲೇ ಹೀಗೆ ತ್ವೇಷದ ನುಡಿಗಳನ್ನು ನುಡಿಯುತ್ತಿರುವದರಿಂದ, ಎದ್ದರೆ ನನ್ನಲ್ಲಿ ಹುರುಡಿಲ್ಲವೆಂದು ಭಾವಿಸುವಿರೇನು? ಎದ್ದೆನೆಂದರೆ, ನಿಮ್ಮೀರ್ವರ ರುಂಡಗಳನ್ನೂ ಧಡದಿಂದ ಬೇರೆಮಾಡಿ ಕಾಲಿನಿಂದ ತುಳಿಯದೆ ಬಿಡಲಿಕ್ಕಿಲ್ಲ. ತಿಳಿಯಿತೇ?'' ಎಂದು ನುಡಿಯುತ್ತ ಕುಳಿತ ಸ್ಥಳದಿಂದೆದ್ದು ಅತ್ತಿತ್ತ ನಾಲ್ಕು ಹೆಜ್ಜೆ ಅಡ್ಡಾಡಹತ್ತಿದನು.

ಕೆಲ ನಿಮಿಷಗಳನಂತರ ಆವನು ಮತ್ತೆ:—''ಏನಂದಿರಿ? ನನ್ನಲ್ಲಿ ಖಡ್ಗ-ಕಠಾರಿಗೆಳಿಲ್ಲವೆಂದಿರಲ್ಲವೇ? ಛೀ, ಸ್ವಾಭಿಮಾನೀಪುರುಷನಿಗೆ ಆ ಆಯುಧಗಳಿಂದೇನು ಪ್ರಯೋಜನ? ಸ್ವಾಭಿಮಾನಿಯ ನಿಡಿದಾದ ಕೈಯೇ ಆತನ ಬಲವಾದ ಖಡ್ಗವು! ಅವನ ಕೈಯೊಳಗೆ ಎಲ್ಲ ಬಗೆಯ ಆಯುಧಗಳೂ ಏಕತ್ರಿತವಾದಂತಾಗಿರುತ್ತವೆ. ಹಿಂದಾನೊಂದು ಕಾಲದಲ್ಲಿ ಜಗತ್ತಿನೊಳಗಿನ

ಎಲ್ಲ ಆಯುಧಗಳು ನಾಮಶೇಷವಾಗಿಬಿಟ್ಟರೂ, ಸ್ವಾಭಿಮಾನೀಪುರುಷನು ಬರೀ ತನ್ನ ಕೈಯಿಂದಲೇ ತನ್ನ ಎದುರಾಳಿಗಳಾದ ನೀಚರ ಹೃದಯಗಳನ್ನು ಸೀಳುವನು; ಹಾಗು ಆ ದುಷ್ಟರ ರಕ್ತವನ್ನು ದಶದಿಸೆಗಳಿಗೆ ಸಿಂಪಡಿಸಿ, ತನ್ನ ಸೇಡಿನ ಹವ್ಯಾಸವನ್ನು ಪೂರ್ತಿಗೊಳಿಸಿಕೊಳ್ಳುವನು. ಪುರುಷನಿಗೆ ಸ್ವಾಭಿಮಾನವೊಂದು ಬಲವಾಗಿ ಇದ್ದರೆ ತೀರಿತು, ಅವನಿಗೆ ಮತ್ತಾವ ಆಯುಧಗಳ ಸಹಾಯವೂ ಬೇಕಾಗಿರುವದಿಲ್ಲ; ಆದರೆ ಈ ಇಂಗ್ರಜೀರಾಜ್ಯ ದಲ್ಲಿ ಯಾವ ಸದ್ಗುಣಕ್ಕೂ ಮರ್ಯಾದೆಯಿಲ್ಲ ಅದರಿಂದಲೇ ಇಂಥ ಅನನ್ವಿತ ಕೃತ್ಯಗಳು ಡಾಣಾಡಂಗುರವಾಗಿನಡೆದಿರುತ್ತವೆ. ನಾನು ಈಗಿಂದೀಗಲೆ ಕೆಳಗೆ ಹೋಗಿ ಇವರೀರ್ವರನ್ನು ಕೊಲ್ಲುವದು ನನ್ನ ಕರ್ತವ್ಯವಾಗಿರುವಂತೆ, ನನ್ನ ಲ್ಲಿಯ ಆ ಸ್ವಾಭಿಮಾನವು ನನ್ನ ಸದ್ಗುಣವನ್ನೇ ವ್ಯಕ್ತಪಡಿಸುವಂತಹದಾಗಿ ರುತ್ತದೆ; ಆದರೆ ಈ ಇಂಗ್ರಜೀ-ಸ್ವಾಭಿಮಾನಶೂನ್ಯ-ರಾಜ್ಯದಲ್ಲಿ ನನ್ನ ಆ ಸದ್ಗುಣಕ್ಕೆ ಪ್ರೋತ್ಸಾಹನ ದೊರೆಯುವದೊತ್ತಟ್ಟಗಿರಲಿ, ಹೆಂಡತಿಯನ್ನು ಕೊಲೆ ಮಾಡಿದವನೆಂದು ನಾನೇ ತಪ್ಪಿತಸ್ಥನಾಗಿ ಮೊದಲು ಶೂಲಕ್ಕೇರಬೇ ಕಾಗುತ್ತದೆ. ವಸ್ತ್ರ-ಒಡವೆಗಳನ್ನೆತ್ತಿಹಾಕುವದಕ್ಕಾಗಿ ಯಾವನೊಬ್ಬ ಶ್ರೀಮಂತನ ಹಸುಗೂಸನ್ನು ಬಾವಿಯಲ್ಲಿ ಚೆಲ್ಲುವ ಬದ್‌ಮಾಷನೂ, ಅಣ್ಣ ತಮ್ಮಂದಿರ ಹೊಲ-ಮನೆಗಳನ್ನೆತ್ತಿಹಾಕುವದಕ್ಕಾಗಿ ಅವರನ್ನು ಕೊಲೆಮಾ ಡುವ ದುಷ್ಟ ದಾಯಾದಿಯೂ. ತಂದೆಯ ಜೀವವಿಮೆಯ ದುಡ್ಡನ್ನು ಪಡೆ ಯುವದಕ್ಕಾಗಿ ತಂದೆಗೆ ವಿಷಹಾಕುವ ಘಾತುಕ ಮಗನೂ, ಸಾಧ್ವಿಯಾದ ಸೊಸೆಯನ್ನು ನಾನಾ ಬಗೆಯಿಂದ ಗೋಳಾಡಿಸಿ ಕೊಲ್ಲುವ ನೀಚ ಅತ್ತೆಯೂ ಹಾಗು ಜಾರಿಣಿಯಾದ ಸ್ತ್ರೀಯನ್ನು ಅವಳಿಗೆ ಪ್ರಾಯಶ್ಚಿತ್ತ ಕೊಡುವ ಸಲು ವಾಗಿ ಕೊಲೆಮಾಡುವಂಥ ನನ್ನಂಥ ಕೇವಲ ಸ್ವಾಭಿಮಾನೀ ಪತಿಯೂ ಈ ಇಂಗ್ರಜೀ ರಾಜ್ಯದಲ್ಲಿ ಒಂದೇ ಕಲಮಿನ ಅಪರಾಧಿಗಳಾಗುತ್ತಿದ್ದು, ನಮ್ಮೆ ಲ್ಲರಿಗೆ ಒಂದೇಬಗೆಯ ಗಲ್ಲಿನ ಇಲ್ಲವೆ ಆಜನ್ಮ ಕರಿನೀರಿನ ಶಿಕ್ಷೆಯು-ವಿಧಿಸ ಲ್ಪಡುತ್ತದೆ! ಈ ಇಂಗ್ರಜೀಕಾಯಿದೆಗೆ ವಿವೇಕವಿಲ್ಲ; ವಿಚಾರವಿಲ್ಲ; ಗುಣಾ ವಗುಣಗಳ ಪರೀಕ್ಷೆಯಿಲ್ಲ; ನ್ಯಾಯಾನ್ಯಾಯಗಳ ಪರಿವೆಯಿಲ್ಲ. ಆದ್ದರಿಂದ ಇಲ್ಲಿ ಯಾವ ದುಷ್ಕರ್ಮಕ್ಕೂ ತಡೆಯಿಲ್ಲ. ಸರಸ್ವತೀ, ಸಾಗಲಿ; ನಿನ್ನ ದುಷ್ಕರ್ಮಗಳ ಓಘವು ಒಳ್ಳೇ ವೇಗದಿಂದ ಸಾಗಲಿ. ಎಲೇ ಡಾಕ್ಟರ ರಂಗ್ಯಾ, ನಡೆಯಿಸು; ನಿನ್ನ ಕೃಷ್ಣಕಾರಸ್ಥಾನವನ್ನು ಮನಸೋಕ್ತವಾಗಿ

ನಡೆಯಿಸು. ನಿಮ್ಮಂಥ ಮನೆಮುರುಕರೇ-ದುರಾಚಾರಿಗಳೇ ಈ ಬ್ರಿಟಿಶ ರಾಜ್ಯದಲ್ಲಿ-ನ್ಯಾಯಾಲಯಗಳಲ್ಲಿ-ಶಿಷ್ಟರೆಂದು ಮೆಶೆಯುವಿರಿ; ನನ್ನಂಥ ಸ್ವಾಭಿಮಾನಿಗಳೇ ಸೆರೆಮನೆಯ ಸೋಬತಿಗಳಾಗಬೇಕಾಗುವದು.''

''ದೇವರೇ, ನಾನು ಈ ಎರಡನೇ ಲಗ್ನವನ್ನು ಮಾಡಿಕೊಂಡದ್ದು ವ್ಯರ್ಥವು. ಮೊದಲನೇ ಹೆಂಡತಿ ಸತ್ತ ಬಳಿಕ ನಾನು ವಿಧುರನಾಗಿಯೇ ಉಳಿದಿದ್ದರೆ ತಪ್ಪೇನಾಗುತ್ತಿತ್ತು? ಮೊದಲನೇ ಹೆಂಡತಿಯು ಸತ್ತ ಕೂಡಲೆ ಅವಳ ವಿಷಯಕವಾದ ಪ್ರೇಮದ ಇಡಿಗಂಟನ್ನು ಅವಳ ಚಿತೆಯಮೇಲೆಯೇ ಸುಟ್ಟುಬಂದು, ನನ್ನಂತೆ ತುಸ ದಿನಗಳಲ್ಲಿಯೇ ಪುನರ್ವಿವಾಹ ಮಾಡಿಕೊಳ್ಳುವ ನಿರ್ಮಲಪ್ರೇಮವಂಚಕರಿಗೆ ಇಂಥ ನಿಷ್ಠುರವಾದ ಶಾಸನವೇ ಆಗತಕ್ಕದ್ದು. ಆ ನನ್ನ ಮೊದಲನೇ ಹೆಂಡತಿಯು ಸ್ವರ್ಗದ ಬಾಗಿಲಲ್ಲಿ ನಿಂತು ನನ್ನನ್ನುದ್ದೇಶಿಸಿ—ಎಲೈ ಪ್ರೇಮವಂಚಕನೇ, ಇದುಕೋ, ನಿನ್ನ ವಂಚನೆಯ ದುಷ್ಫಲವನ್ನು! ಎಂದು ನನಗೆ ಈ ಸರಸ್ವತಿಯ-ಈ ನನ್ನ ಪ್ರೀತಿಯ ಎರಡನೇ ಹೆಂಡತಿಯ-ಲೀಲೆಗಳ ಕಡೆಗೆ ಬೊಟ್ಟುಮಾಡಿ ತೋರಿಸುತ್ತಿರುವಳು ಕಂಡಿರಾ. ನಾವು ಗಂಡಸರೆಲ್ಲರೂ ಬಹು ನಾಚಿಕೆಗೇಡಿಗಳು; ಬಹು ಖೊಟ್ಟಿ ಸ್ವಭಾವದವರು. ನಾವು ಸತ್ತ ಬಳಿಕ ನಮ್ಮ ಹೆಂಡಂದಿರುಮಾತ್ರ ನಮ್ಮ ಸ್ಮರಣಮಾಡುತ್ತ ತಮ್ಮ ಆಯುಷ್ಯವನ್ನೆಲ್ಲ ನಾನಾ ಬಗೆಯ ಕಷ್ಟ-ನಿಷ್ಠುರತೆಗಳಲ್ಲಿ ಕಳೆಯಬೇಕು; ಆದರೆ ಯಾವ ತರುಣಿಯರು ತಮ್ಮ ಭರ ತಾರುಣ್ಯದ ಸೊಬಗನ್ನೆಲ್ಲ ನಮ್ಮ ಸ್ವಾಧೀನಪಡಿಸಿ, ನಾವು ಅಂದದ್ದನಿಸಿಕೊಂಡು, ಕೊಟ್ಟದ್ದುಟ್ಟು, ಹಾಕಿದ್ದನ್ನು ತಿಂದು ನಮ್ಮೊಡನೆ ತನ್ಮಯರಾಗಿರುವರೋ, ದೈವಸಂಕಲ್ಪದ ಮೂಲಕ ಅವರ ಆಯುಷ್ಯವು ನಮಗಿಂತ ಕಡಿಮೆಯಾಗಿ ಅವರು ನಮ್ಮೆದುರಿಗೆ ತಮ್ಮ ದೀನ ನೇತ್ರಗಳಿಂದ ನಮ್ಮ ಮುಖಭಾವವನ್ನೇ ನೋಡುತ್ತ ದೈವಾಧೀನರಾದರೆ ತೀರಿತು; ನಾವು ಅವರ ದಿನಕರ್ಮವಾಗುವ ದಾರೀ ಕೂಡ ನೋಡದೆ, ಬೇರೆಯೊಬ್ಬ ವಧುವಿನ ಪಾಣಿಗ್ರಹಣಕ್ಕೆ ತತ್ಪರರಾಗುವೆವು. ನಾವು ಎಷ್ಟು ನೀಚರು, ಎಂಥ ಪಾಪಿಗಳು, ಎಂಥ ಕೃತಘ್ನರು? ಹಾಯ್! ಹಾಯ್! ದೇವಾ, ನಮ್ಮಂಥವರಿಗೆ ಹೀಗೆ ನೀನು ಆಗಾಗ್ಗೆ ಯೋಗ್ಯ ಶಿಕ್ಷೆ ವಿಧಿಸುತ್ತಿದ್ದರೂ ನಮ್ಮ ಗತಿಯು ಇಷ್ಟುರಮಟ್ಟಿಗೆ ಇರುತ್ತದೆ!!''

ಪಶ್ಚಾತ್ತಾಪದಿಂದ ನರಸನಗೌಡನ ಸೊಂಡೆಯೊಣಗಿ ಕಪ್ಪಿಟ್ಟಿತು. ಅವನ ಮೊದಲನೇ ಹೆಂಡತಿಯ ನಿಷ್ಪಾಪಮೂರ್ತಿಯು ಅವನೆದುರಿಗೆ ಬಂದು ನಿಂತಂತಾಯಿತು. ಸರಸಕ್ಕನೊಡನೆ ಲಗ್ನವಾಗುವಾಗ ತನ್ನ ವಯಸ್ಸು ಕಡಿಮೆ ಕಾಣಬೇಕೆಂದು ಮಾಡಿದ ತ್ರೋಟಕಗಳೂ, ಮತ್ತನೇಕ ಕುಹಕ ವಿಚಾರಗಳೂ ಅವನೆದುರಿಗೆ ಥಯ್ ಥಯ್‌ಮಾನವಾಗಿ ಕುಣಿಯ ಹತ್ತಿದವು. ಆಗ ಮಿಾಸೆ-ಗಡ್ಡಗಳಿಗೆ ಹಚ್ಚಿದ್ದ ಕಲಪುಗಳೂ, ಕಾಮಿನಿಯಾ ಮೊದಲಾದ ಎಣ್ಣೆಗಳೂ ಈಗ ಅವನಿಗೇ ಅಂಜನ ಹಚ್ಚಿದಂತಾದವು. ಯಮಧರ್ಮನ ಆಳುಗಳು ತನ್ನೆಡೆಗೆ ಬಂದು ತನ್ನನ್ನು ಕಲ್ಲು ಮುಳ್ಳುಗಳ ದಾರಿಯೊಳಗಿಂದ ದರದರ ಎಳೆಯುತ್ತ ತೆಗೆದುಕೊಂಡು ನಡೆದಿರುವರೆಂದೂ, ಅವರು ಯಮನ ಬಳಿಗೆ ಒಯ್ದೊಡನೆ ಆತನು ತನ್ನ ಕೈಯೊಳಗಿನ ಚಪ್ಪ ಗೊಡ್ಲಿಯ ಒಂದೇ ಹೊಡತದಿಂದ ತನ್ನ ರುಂಡವನ್ನು ಹಾರಿಸಿ, ತನ್ನನ್ನು ಪಾತಾಳಲೋಕದೊಳಗಣ ರೌರವನರಕಕ್ಕೆ ಸಾಗಿಸುತ್ತಿರುವಾಗ ಖಟ್‌ಖಡ ಲ್ಲೆಂಬ ಧ್ವನಿಮಾಡುತ್ತ ಭಯಂಕರವಾದ ಕೋಲುಮಿಂಚಾದಂತೆಯೂ ಗೌಡನಿಗೆ ಭಾಸವಾಯಿತು.

ನರಸನಗೌಡನ ಮನೋಭೂಮಿಕೆಯಲ್ಲಿ ಮೇಲೆ ವಿವರಿಸಿದಂತಹ ವಿಚಾರಗಳು ಹುಟ್ಟುವದಕ್ಕೂ, ಆ ನಾಟಕಗೃಹದೊಳಗಿನ ಎಲ್ಲ ದೀಪಗಳೂ ಒಮ್ಮೆಲೆ ಮಾಯವಾಗಿ ರಂಗಭೂಮಿಯಮೇಲೆ ಖಟ್-ಖಡಲ್ಲೆಂಬ ಭಯಂ ಕರವಾದ ಸಪ್ಪಳವಾಗಿ ಕೋಲುಮಿಂಚು ಕಾಣಿಸಿಕೊಳ್ಳಲಿಕ್ಕೂ ಏಕಸವು ಯಾವಚ್ಛೇದದಿಂದ ಗಂಟೇಬಿತ್ತು. ಅಲ್ಲಿಗೆ ಆ ನಾಟಕದ ಆ ಅಂಕ ಮುಗಿ ಯಿತು. ಮತ್ತೆ ಎಲ್ಲ ಕಡೆಗೂ ವಿದ್ಯುದ್ದೀಪಗಳ ಪ್ರಚಂಡ ಪ್ರಕಾಶವು ಬೆಳಗಹತ್ತಿತು. ನಾಟಕ ನೋಡುತ್ತಿದ್ದವರೆಲ್ಲರು ಜಾಗರೂಕರಾದರು. ಡಾ. ರಂಗನಾಥರಾಯನೂ ತುಸ ಭಾನವುಳ್ಳವನಾದನು. ಸರಸಕ್ಕನೂ ಚಡಪ ಡಿಸಿ ಎದ್ದು ನಿಂತಳು.

“ಡಾಕ್ಟರರೇ, ಎಷ್ಟೊತ್ತಾಯಿತು ಇದು!” ಎಂದು ಡಾಕ್ಟರನ ರಿಸ್ಟ ವಾಚದ ಕಡೆಗೆ ನೋಡಿ ಮತ್ತೆ—“ಡಾಕ್ಟರರೇ, ನಡೆಯಿರಿನ್ನು, ಬೇಗನೆ ಮನೆಗೆ ಹೋಗೋಣ ಅವರು ಇಷ್ಟರಲ್ಲಿ ಮನೆಗೆ ಕೂಡ ಬಂದಿರಬಹುದಾ ಗಿದೆ,” ಎಂದು ಸರಸಕ್ಕನು ಒಳ್ಳೇ ಆತುರದಿಂದ ನುಡಿದಳು.

ಡಾಕ್ಟರನ ಮನಸ್ಸಿನಲ್ಲಿ ಅವಳನ್ನೀಗಲೆ ಮನೆಗೆ ಕಳಿಸುವದಿರಲಿಲ್ಲ.

ನಾಟಕದ ಕಡೆಯ ಅಂಕ ಮುಗಿಯುವವರೆಗೆ ಅವಳನ್ನು ಕೂರಿಸಿಕೊಳ್ಳುವದಿತ್ತು; ಆದರೆ ಸರಸಕ್ಕನ ಮನಸ್ಸಿನ ವಿರುದ್ಧ ವರ್ತಿಸುವ ಧೈರ್ಯವು ಅವನಿಗಾಗಲಿಲ್ಲ. ಅದರಿಂದ ಅವನು ಆ ಕೂಡಲೆ ಅಲ್ಲಿಂದೆದ್ದು ಸರಸಕ್ಕನೊಡನೆ ಥೇಟರದ ಹೊರಗೆ ಬಂದನು. ನಮ್ಮ ನರಸನಗೌಡನೂ ಅವರ ಹಿಂದಿಂದೆ ಹೊರಗೆ ಬಂದನು. ಅವನ ಮನಸ್ಸಿನಲ್ಲಿ ನಾನಾಬಗೆಯ ಸುಷ್ಟ-ದುಷ್ಟ ವಿಚಾರಗಳ ತಾಕಲಾಟವು ಭರದಿಂದ ನಡೆದಿತ್ತು. ಮನುಷ್ಯನಿಗೆ ಹುಚ್ಚು ಹಿಡಿಯುವ ಪ್ರಸಂಗವು ನರಸನಗೌಡನಂತಹ ಅಲ್ಲೋಲ ಕಲ್ಲೋಲ ವಿಚಾರಗಳ ತಾಕಲಾಟದಿಂದಲೇ ಉಂಟಾಗುತ್ತಿರುತ್ತದೆ. ಆಗ ಅವನಿಗೂ ಅಲ್ಪ ಸ್ವಲ್ಪ ಹುಚ್ಚಿನ ನೆರಳು ಬಿದ್ದಿತ್ತೆಂದರೆ ತಪ್ಪೇನು?

ನರಸನಗೌಡನಿಗೆ ಈ ಬಗೆಯಾಗಿ ಹುಚ್ಚು ಹಿಡಿಯುವ ಪ್ರಸಂಗವು ಬಂದಿದ್ದರೂ, ಆತನು ಇಂದಿನ ನಾಟಕಕ್ಕೆ ಬಂದಿದ್ದು, ತಮ್ಮ ಪಾಳತಿಯ ಮೇಲಿರುವನೆಂಬದರ ಲವಮಾತ್ರ ಕಲ್ಪನೆ ಕೂಡ ಆ ಡಾಕ್ಟರನಿಗೂ, ಸರಸಕ್ಕನಿಗೂ ಬಂದಿರಲಿಲ್ಲ. ನರಸನಗೌಡನು ಮೇಲಟ್ಟದಿಂದ ಇವರನ್ನು ನೋಡಿದಂತೆ, ಇವರು ಅವನನ್ನು ನೋಡಿದ್ದರೆ ಆ ನಾಟಕಗೃಹದಲ್ಲಿಯೇ ಈ ತ್ರಿವರ್ಗರ ಮತ್ತೊಂದು ಉಪನಾಟಕವು ಪರಿಣಮಿಸಿಹೋಗುತ್ತಿತ್ತು. ಇರಲಿ.

ಹೊರಗೆ ಬಂದೊಡನೆ ಡಾಕ್ಟರನು ಸರಸಕ್ಕನೊಡನೆ ಒಂದು ಟ್ಯಾಕ್ಸಿಯನ್ನು ಹತ್ತಿ ಭುರ್ರೆಂದು ಹೊರಟು ಹೋದನು. ದಾರಿಯಲ್ಲಿ ಒಬ್ಬರೂ ಪಿಟ್ಟೆಂದು ಮಾತಾಡಲಿಲ್ಲ. ಇಂದು ಸರಸಕ್ಕನು ಒಳ್ಳೇ ಗಹನವಾದ ವಿಚಾರದಲ್ಲಿ ಮಗ್ನಳಾಗಿದ್ದಳು. ಡಾಕ್ಟರನೂ ಬೇರೊಂದು ಬಗೆಯ ತೀಕ್ಷ್ಣ ವಿಚಾರಕ್ಕೆ ಆಹುತಿಯಾಗಿದ್ದನು. ಆಗ ಅವರಿಬ್ಬರ ಮನಸ್ಸಿನಲ್ಲಿಯೂ ಒಂದೇ ಬಗೆಯ-ಪರಸ್ಪರರಿಗನುಕೂಲವಾದ ವಿಚಾರಗಳುತ್ಪನ್ನವಾಗಿದ್ದವೇನು? ಇಲ್ಲೆಂದು ಆದಾರು ಹೇಳಬೇಕು? ತಾರುಣ್ಯವೆಂಬ ರಾಜ್ಯದಲ್ಲಿ ಸಂಚರಿಸತೊಡಗಿದ್ದ ಯುವಕ-ಯುವತಿಯರ ಮನೋವಿಕಾರಗಳ ಪಟ್ಟು ಆದಾರಿಗೆ ತಿಳಿಯಬೇಕು? ಅದು ಏನೇ ಇರಲಿ, ಡಾಕ್ಟರನು ಸರಸಕ್ಕನನ್ನು ಮನೆಗೆ ಕಳಿಸಿ ಹೊರಟು ಹೋಗುವಾಗ ಸರಸಕ್ಕನು ಅವನನ್ನುದ್ದೇಶಿಸಿ ಮತ್ತೆ ಮತ್ತೆ ಹೇಳಿದಳೇನಂದರೆ:—"ಡಾಕ್ಟರರೇ, ನಾಳೆ ಬೆಳಗಿನ ಝಾವದ ಮೂರು ಗಂಟೆಗೆ ಆ! ಮೂರಕ್ಕೆ ತಪ್ಪದೆ ಬರ್‍ರಿ, ಮರೆಯಬೇಡಿರಿ. ಮೂರಕ್ಕೆ ಸರಿಯಾಗಿ ನಾನು ನಿಮ್ಮ ಆಸ್ಪತ್ರಿಯ ಬಳಿಗೆ ಬಂದಿರುತ್ತೇನೆ."

ಅದಕ್ಕೆ ಉತ್ತರವಾಗಿ ಡಾಕ್ಟರನು ಮುಗುಳುನಗೆಯಿಂದ—ನಾನೂ ಬರುವೆನು, ಖಂಡಿತವಾಗಿ ನಾಳಿನ ಬೆಳಗಿನ ಝಾವದ ೩ಕ್ಕೆ ಬರುತ್ತೇನೆ. ನೀವು ಚಿಂತಿಸಬೇಡಿರಿ. ಇಕೊಳ್ಳಿರಿ, ನನ್ನ ಆಸ್ಪತ್ರೆಯ ಕೀಲಿಕೈಯನ್ನು! ನನ್ನ ಹತ್ತರ ಇನ್ನೊಂದು ಕೀಲಿಕೈ ಇರುತ್ತದೆ. ನೀವು ಮೊದಲು ಬಂದರೆ ನೀವು ಕೀಲಿ ತೆಗೆದು ಒಳಗೆ ಕುಳಿತಿರಬೇಕು; ನಾನು ಬಂದರೆ ನಾನು ಬಾಗಿಲ ತೆರೆದು ಒಳಗಿರುತ್ತೇನೆ. ಆ ಅಪರಾತ್ರಿಯಲ್ಲಿ ಆಸ್ಪತ್ರೆಯು ತೆರೆ ದಿರುವದೆಂದು ನೀವು ಅಂಜಬೇಡಿರಿ. ಆಗ ನನ್ನ ಹೊರತು ಅಲ್ಲಿ ಮತ್ತಾರೂ ಇರಲಿಕ್ಕಿಲ್ಲವೆಂಬದನ್ನು ಮನದಟ್ಟುಮಾಡಿಕೊಂಡಿರಬೇಕು.

ಒಳ್ಳೇದೆಂದು ಸರಸಕ್ಕನು ತಲೆ ಅಲ್ಲಾಡಿಸುತ್ತ ಡಾಕ್ಟರನ ಕಡೆಗೆ ಒಮ್ಮೆ ಓರೆನೋಟದಿಂದ ನೋಡಿದಳು ಮಾತ್ರ. ಅಷ್ಟಕ್ಕೇ ಡಾಕ್ಟರನು ಪರಮ ಸಂತುಷ್ಟನಾಗಿ ಹೊರಟು ಹೋದನು.

---

## ಆರನೇ ಓರೆನೋಟ!



ಡಾಕ್ಟರ ರಂಗನಾಥರಾಯನು ಕಡು ಸಂತೋಷದಿಂದ ಹೊರಟು ಹೋದನು. ಸರಸಕ್ಕನು ಗಹನವಾದ ಚಿಂತೆಗೊಳಗಾಗಿ ಗಂಡನ ದಾರೀ ಕಾಯುತ್ತ ಮನೆಯಲ್ಲಿ ಕುಳಿತಳು. ಇಂದು ರವಿವಾರವಾಗಿದ್ದರೂ ತನ್ನ ಗಂಡನು ಇನ್ನೂ ಮನೆಗೇಕೆ ಬರಲಿಲ್ಲೆಂದು ಆಲೋಚಿಸಿದಳು. ಮನೆಗೆ ಕೀಲಿ ಹಾಕಿದ್ದನ್ನು ಕಂಡು ಹಾಗೇ ಮರಳಿ ಹೋದರೇನೆಂದು ಚಿಂತಿಸಿದಳು. ಕೀಲಿ ಹಾಕಿದ್ದನ್ನು ಕಂಡು ಅವರಿಗೆ ಸಿಟ್ಟು ಬಂದಿರಲಿಕ್ಕಿಲ್ಲವಷ್ಟೇ? ಸಿಟ್ಟು ಬಂದಿದ್ದರೆ ಅವರಿಗೇನೆಂದು ನೆವಹೇಳಬೇಕೆಂದೂ ಅವಳು ಎಣಿಕೆ ಹಾಕುತ್ತಿದ್ದಳು.

ಅಷ್ಟರಲ್ಲಿ ಯಾರೋ ಬಂದ ಕಾಲಸಪ್ಪಳವು ಕೇಳಿಸಿತು. ಅದನ್ನು ಕೇಳಿ ಅವಳ ಹೃದಯವು ಧಡಧಡೆಂದು ಹಾರಹತ್ತಿತು. ಅಷ್ಟರಲ್ಲಿ ನರಸನಗೌಡನೂ ಅಲ್ಲಿಗೆ ಬಂದನು. ಅವಳು ಒಮ್ಮೆ ಓರೆನೋಟದಿಂದ ಅವನ ಮುಖಚರ್ಯೆಯನ್ನು ನಿರೀಕ್ಷಿಸಿದಳು. ಅವನ ಮುಖಭಾವದಲ್ಲಿ ಏನೂ ಹೆಚ್ಚು ಕಡಿಮೆಯಾಗಿರದೆ, ದಿನದಂತೆಯೇ ಸ್ವಾಭಾವಿಕವಾಗಿದ್ದುದು ಅವಳಿಗೆ ಕಂಡುಬಂದಿತು. ಆಗ ಸರಸಕ್ಕನ ಜೀವದ ತಳಮಳವು ತುಸ ಶಾಂತವಾಯಿತು.

ನರಸನಗೌಡನಿಗೆ ಒಂದಿಷ್ಟೂ ಸಿಟ್ಟು ಬಂದಿರಲಿಲ್ಲ. ಅವನು ತನ್ನ ಎಲ್ಲ ಸಿಟ್ಟನ್ನು ವಿವೇಕದ ಹಗೆಯಲ್ಲಿ ಹುಗಿದುಬಿಟ್ಟು ಶಾಂತನಾಗಿದ್ದನು; ಅಥವಾ ಅವನು ತೋರಿಕೆಯಲ್ಲಿ ಅಷ್ಟು ಶಾಂತನಾಗಿ ತೋರುತ್ತಿದ್ದರೂ, ಮನಸ್ಸಿನಲ್ಲಿ ಮತ್ತೇನೆಂದು ಹವಣಿಕೆ ಹಾಕಿದ್ದನೋ ಅದಾರು ಹೇಳಬೇಕು? ಗ್ರೀಷ್ಮಕಾಲದ ಪ್ರಚಂಡವಾದ ಬಿರುಗಾಳಿಯ ನಂತರದ ನಿಃಶಬ್ದ ಶಾಂತತೆಯು ಆಗಾಮಿ ಗುಡುಗು-ಮಿಂಚುಗಳ ಹಾಗು ಭಯಂಕರವಾದ ಮಳೆಯ ದ್ಯೋತಕ-ಚಿಹ್ನವಾಗಿರುವಂತೆಯೂ, ಮೊದಲನೇ ವರ್ಷದ ಅತ್ಯುತ್ತಮ ಬೆಳೆಗಳು ಆಗಾಮಿ ವರ್ಷದಲ್ಲಿ ಅದೇ ಸ್ಥಳದಲ್ಲಾಗುವ ಭೂಕಂಪದ ಪೂರ್ವ ಚಿಹ್ನಗಳಾಗಿರುವಂತೆಯೂ ನರಸನಗೌಡನ ಅಂದಿನ ಆ ನಿತಾಂತ ಶಾಂತವಾದ ಮುಖಭಾವವು ಮತ್ತಾವ ಅಭದ್ರಬೀತನ್ನು ಪಾರುಗಾಣಿಸಲು ತತ್ಪರವಾಗಿತ್ತೋ ತಿಳಿಯದು. ಇಂದಿನ ರಾತ್ರಿಯು ಹೇಗೆ ಕೊನೆಗಾಣುವದೋ? ದಿನದಂತೆ ಶಾಂತವಾಗಿ ಪರಿಣಮಿಸುವದೋ ಇಲ್ಲವೆ ಮತ್ತಾವ ಭಯಂಕರ ಕೃತ್ಯಗಳು ಇಂದಿನ ರಾತ್ರಿಯಲ್ಲಿ ಈಡೇರುವವೋ? ಅಶ್ವತ್ಥಾಮನು ಪಾಂಡವರ ಶಿಬಿರವನ್ನು ಹೊಕ್ಕು ಐದೂಜನ ಪಾಂಡವರ ಮಕ್ಕಳನ್ನು ಸಂಹರಿಸಿದ ರಾತ್ರಿಯಲ್ಲಾದರೂ ಮೊದಲು ಭಯಂಕರವಾದ ಸೂಚಕಚಿಹ್ನಗಳೆಲ್ಲಿ ಕಂಡವು? ಆ ರಾತ್ರಿಯಾದರೂ ಇಂದಿನ ರಾತ್ರಿಯಂತೇ ಶಾಂತವಾಗಿದ್ದಿತು. ದೇವರೇ, ಅಂಥ ಯಾವ ಅನನ್ವಿತ ಕೃತ್ಯಗಳೂ ನರಸನಗೌಡನಿಂದ ಇಂದಿನ ರಾತ್ರಿಯಲ್ಲಿ ಘಟಿಸಬೇಡೆಂದರಾಯಿತು! ಶಾಂತಂ ಪಾಪಂ!

ನರಸನಗೌಡನು ತಾಳಿದ್ದ ಶಾಂತತೆಯು ದಿನದಂತೆ ಸ್ವಾಭಾವಿಕವಾದದ್ದೇನೂ ಆಗಿರಲಿಲ್ಲ. ಸರಸಕ್ಕನನ್ನು ಮೋಸಗೊಳಿಸುವದಕ್ಕಾಗಿಯೇ ಆತನು ಅಷ್ಟು ನಿತಾಂತ ಶಾಂತನಾಗಿ ತೋರುತ್ತಿದ್ದನು. ಅದರಿಂದ ಸರಸಕ್ಕನು ಸಂಪೂರ್ಣವಾಗಿ ಮೋಸಹೋದಳು. ತಾವು ಇಂದು ನಾಟಕದಿಂದ ಬರಲಿಕ್ಕೆ ತಡವಾದರೂ ದೇವರು ತಮ್ಮನ್ನು ಸಂರಕ್ಷಿಸಿರುವನೆಂದು ಅವಳ ಭಾವನೆಯಾಗಿಬಿಟ್ಟಿತು. ಪಾಪೀಜನರಿಗೆ ಇಂಥ ಮಿಥ್ಯವಾದ ಭ್ರಮವೇ ಸದಾ ಆಗುತ್ತಿರುತ್ತದೆ. ದುಷ್ಕೃತ್ಯ ಮಾಡುವಾಗ ತಮ್ಮನ್ನಾರೂ ನೋಡಲಿಲ್ಲೆಂದು ಅವರು ಭಾವಿಸುತ್ತಿರುತ್ತಾರೆ;ಆದರೆ ಸಂಕಟಗಳ ಬಲೆಯು ಎಡೆಬಿಡದೆ ಅವರನ್ನು ಸುತ್ತುತ್ತಲೆ ಇರುತ್ತದೆ. ಸಂಕಟಗಳು ಅತಿ ಸಮೀಪಿ

ಪಿಸಿದ ಹಾಗೆಲ್ಲ ಅವು ತನ್ನಿಂದ ಬಹು ದೂರಿರುವವೆಂದೇ ಅವರ ತಿಳವಳಿಕೆ ಯಾಗಿರುತ್ತದೆ. ಅಂತೇ ಪಾಪೀ ಮನುಷ್ಯನಂತಹ ಆತ್ಮವಂಚಕನು ಈ ಜಗತ್ತಿನಲ್ಲಿ ಬೇರೊಬ್ಬನಿಲ್ಲೆಂದು ನಿರ್ವಿವಾದವಾಗಿ ಹೇಳಬಹುದು.

ನರಸನಗೌಡನ ಮುಖಚರ್ಯೆಯು ಮೇಲೆ ಸಿಟ್ಟಿನ ಆವಿರ್ಭಾವವಿರ ದ್ದರಿಂದ ಸರಸಕ್ಕನಿಗೆ ಒಂದು ಬಗೆಯ ಸಮಾಧಾನವೆನಿಸಿದ್ದರೂ, ಅವಳ ಪಾಪೀ ಮನಸ್ಸು ಅವಳನ್ನು ಸುಮ್ಮನಿರಗೊಡಲೊಲ್ಲದು. ಅವಳ ಮನ ಸ್ಸಿನ ವಿಚಾರಚಕ್ರವು ಒತ್ತರದಿಂದ ಚಲಿಸಹತ್ತಿತು. ಅವಳಿಂದ ಪರಪುರುಷ ನೊಡನೆ ನಾಟಕಕ್ಕೆ ಹೋದ ಮೊದಲನೇ-ಬಹು ದೊಡ್ಡ ತಪ್ಪು-ಆಗಿತ್ತು. ಮನುಷ್ಯನ ಮೊಟ್ಟಮೊದಲಿನ ಪಾಪಕೃತ್ಯವೆಂದರೇ ಶೇಷಾಯುಷ್ಯದಲ್ಲಿ ಅವನ ಹೃದಯಸಂಪುಟದಲ್ಲಿ ಒಂದೇಸವನೆ ಧಗೆಧಗಿಸಹತ್ತುವ ಪಾಪಾ ನಲದ ಪುಟುಪಿನ ಕಿಡಿಯುದು. ಅದು ಒಮ್ಮಿಲ್ಲೊಮ್ಮೆ ಭಯಂಕರವಾಗಿ ಉರಿಯಹತ್ತಿ, ಮನುಷ್ಯನ ವಿವೇಕ, ವಿಚಾರ, ಆಚಾರಗಳನ್ನು ಸುಟ್ಟು ಸೂರೆಗೊಳ್ಳತಕ್ಕಂತಹದು. ಸರಸಕ್ಕನ ಮೈಗೆ ಆಗ್ಗೆ ಥರ್ಮಾಮಿಟರ (ಮನುಷ್ಯನ ಶರೀರದೊಳಗಿನ ಜ್ವರದ ಉಷ್ಣತೆಯನ್ನಳೆಯುವ ಅರ್ವಾ ಚೀನಕಾಲದ ಯಂತ್ರ) ವನ್ನು ಹಚ್ಚಿದ್ದರೆ ಅದು ಸ್ವಾಭಾವಿಕವಾದ ಉಷ್ಣ ತಾಮಾನಕ್ಕಿಂತ ಕಾಲಂಶದಷ್ಟು ಕೂಡ ಹೆಚ್ಚುತ್ತಿರಲಿಕ್ಕಿಲ್ಲ; ಆದರೆ ಆಕೆಯ ಹೃದಯದಾಹ, ಮನೋದಾಹ ಇವುಗಳ ಉಷ್ಣತೆಯನ್ನು ಅಳೆಯುವ ಸಾಧನಗಳಿದ್ದರೆ, ಆ ಉಷ್ಣತೆಯಿಂದ ಎಷ್ಟೋ ಕುದುರೆಯ ಶಕ್ತಿಯ ಎಂಜಿ ನವು ಸಹಜವಾಗಿ ನಡೆಯಬಹುದಾಗಿತ್ತು.

ಅಂದಿನ ಆ ವಿಕರಾಳ ರಾತ್ರಿಯಲ್ಲಿ ಮೂರು ವ್ಯಕ್ತಿಗಳು ಭಿನ್ನ ಭಿನ್ನ ಮನಸ್ಥಿತಿಯಲ್ಲಿ ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದವು. ನಮ್ಮ ಸರ ಸಕ್ಕನ ಮನಸ್ಥಿತಿಯ ಬಗ್ಗೆ ಮೇಲೆ ವಿವರಿಸಿದ್ದೇ ಇದೆ. ಅವಳ ಮನಸ್ತಾ ಪವು ಅವಳನ್ನು ಸುಟ್ಟು ಸೂರೆಗೊಳ್ಳುತಲಿತ್ತು. ಈ ಮೊದಲು ಸರ್ಕಸ್ಸಿಗೆ ಹೋಗುವ ಕುರಿತು ಅವಳಿಗೊಮ್ಮೆ ವಿಶೇಷವಾಗಿ ಮನಸ್ತಾಪವಾದ ವರ್ಣನವನ್ನು ನಮ್ಮ ವಾಚಕರು ಓದಿ ತಿಳಿದಿರುವರು; ಆದರೆ ಇಂದಿನ ಮನಸ್ತಾಪದ ಎದುರಿಗೆ ಅದು ತೀರ ಕ್ಷುಲ್ಲಕವೆಂದೇ ಅನ್ನಬಹುದು. ಅವಳಿ ಗಿಂದು ಎಳ್ಳಷ್ಟೂ ಸಮಾಧಾನವೆನಿಸಲಿಲ್ಲ. ಇಡೀ ಮುಂಬಯಿ ಪಟ್ಟಣ ವನ್ನೇ ಯಾರಾದರೂ ಸ್ಟೋವ್ಹಿನ ಮೇಲೆ ಹಿಡಿದು ಹೊತ್ತಿಸುತ್ತಿರುವಂತೆ

ಅವಳಿಗೆ ಭಾಸವಾಗಿತ್ತು. ಶಿವ! ಶಿವ!! ಅಂದಿನ ಆ ಹೃದಯತಾಪ, ಪ್ರಚಂಡವಾದ ಯಾತನೆಗಳಿಗೆ ಅವಳ ಆ ಸೂಕ್ಷ್ಮ ತನುಲತಿಕೆಯು ಹೇಗೆ ತಡೆದೀತು? ಅಂದು ಅವಳಿಗೆ ಆ ಅವಸ್ಥೆಯಲ್ಲಿ ಹೇಗೆ ನಿದ್ದೆಹತ್ತೀತು?

ಅತ್ತ ಮನ್ಮಥನ ಸಾವಿರಾರು ಬಾಣಗಳ ಆಘಾತಕ್ಕೀಡಾದ ಡಾ. ರಂಗನಾಥರಾಯನು ಹಾಸಿಗೆಯ ಮೇಲೆ ಹೊರಳಾಡುತ್ತಿದ್ದನು. ಗಡಿಯಾರದ ಮುಳ್ಳು ಒಮ್ಮೆಲೆ ಮೂರರ ಮೇಲೆ ಹೋಗಿ ನಿಲ್ಲಬೇಕು; ವರ್ಷಾ ಋತುವಿನ ಅಮಾವಾಸ್ಯೆಯ ರಾತ್ರಿಯಲ್ಲಿ ಹೇಗೆ ಸಾರ್ವತ್ರಿಕವಾದ ಕಾರ್ಗತ್ತಲೆಯು ನೆಲೆಗೊಳ್ಳುವದೋ ಹಾಗೆ ಎಲ್ಲೆಲ್ಲಿಯೂ ಕತ್ತಲೆಯು ಮುಸುಕಬೇಕು; ಆ ರಾತ್ರಿಯು ಹೊಗೆಬಂಡಿಯ ಅಥವಾ ವಿಮಾನದ ಅದೇಕೆ ಮನೋವೇಗದಿಂದ ಮುಂದೆ ಸಾಗಿ ಬೆಳಗಿನ ಝಾವದ ಮೂರಕ್ಕೆ ಸಮೀಪಿಸಬೇಕು. ಎಂದು ಆ ಡಾಕ್ಟರನಿಗೆ ಅನಿಸುತ್ತಿತ್ತು. ಸರಸಕ್ಕನ ಸಮಾಗಮದ ವಿನಃ ಕಳೆಯುವ ಇದೇ ಕಡೆಯ ರಾತ್ರಿಯೆಂದು ಅವನ ಪ್ರಾಮಾಣಿಕ ಮತವಾಗಿತ್ತು. ನಾಳಿನಿಂದ ಅವಳು ತನ್ನವಳೇ ಎಂದೂ ಅವನ ದೃಢ ಭಾವನೆಯು. ಇಂದಿನ ತನ್ನ ಯುಕ್ತಿಯು ಚೆನ್ನಾಗಿ ನಾಟಿತು, ಇಲ್ಲದಿದ್ದರೆ "ನಸಕಿನಲ್ಲಿ ಆಸ್ಪತ್ರಿಗೆ ಬನ್ನಿರೆ"ಂದು ಅವಳು ತಾನಾಗಿಯೇ ಎಂದೂ ಹೇಳುತ್ತಿರಲಿಲ್ಲ. ಅಹಹ!! ಆ ನನ್ನ ಆಸ್ಪತ್ರಿಯಲ್ಲೇ ಎಲ್ಲಕ್ಕೂ ಮೊದಲು ಅವಳೊಡನೆ ಸಮಾಗಮವಾಗುವದಲ್ಲವೇ? ನಾನು ಆ ಮನೆಯನ್ನು ಆಸ್ಪತ್ರಿಗಾಗಿ ಬಾಡಿಗೆ ಹಿಡಿಯುವಾಗ ಒಬ್ಬ ಲಾವಣ್ಯಪೂರ್ಣ ತರುಣಿಯ ಸಮಾಗಮದ ರಂಗಮಹಾಲು ಆದಾದೀತೆಂಬ ಕಲ್ಪನೆಯಾರಿಗಿತ್ತು? ಆದರೆ ದೈವಬಲದಿಂದ ಆ ಕಲ್ಪನೆಯು ಇಂದು ಸತ್ಯವಾಗುವದು. ಯಾವ ಶುಭ ಮುಹೂರ್ತದಲ್ಲಿ ನಾನಲ್ಲಿ ಆಸ್ಪತ್ರಿಯನ್ನು ಹಾಕಿದೆನೊ? ಎಲೈ ಸಕಲ ಭಾಷೆಯೊಳಗಿನ ಕವೀಶ್ವರರೇ, ನಾಟಕ-ಕಾದಂಬರಿಕಾರರೇ, ಪ್ರಿಯ-ಪ್ರಿಯಕರಣಿಯರ ಪ್ರೇಮಗೀತಗಳನ್ನೂ, ಭಾಷಣಗಳನ್ನೂ, ಪಂಚಾಯುಧನ ಅಸ್ತ್ರಗಳ ನಾನಾ ಬಣ್ಣಗಳನ್ನೂ ವಿವರಿಸಿ ಹೇಳಲಿಕ್ಕೆ ಇಷ್ಟೊಳ್ಳೇ ಸಮಯವಾಗಿದೆ. ಇನ್ನು ತುಸ ಹೊತ್ತಿನಲ್ಲಿಯೇ ಮೂರು ಹೊಡೆಯುವದು. ಆ ಕೂಡಲೆ ನಾನೂ ಆ ಸರಸ್ವತಿಯೂ-ಅಲ್ಲಲ್ಲ-ನಾವು ರಾಧಾ-ಕೃಷ್ಣರು ಆ ನನ್ನ ಆಸ್ಪತ್ರಿಯಲ್ಲಿ ಮನಬಂದಂತೆ ಕೇಳಿಯಾಟವನ್ನಾಡತಕ್ಕವರು. ಬೇಕಾದವರು ಬೇಕಾದ ಹಾಗೆ ನಮ್ಮನ್ನು ಸ್ತುತಿಸಲಿ!-ನಿಂದಿಸಲಿ! ನಾವದರ ಕಡೆಗೆ

ಲಕ್ಷ್ಯಗೊಡುವವೇತಕ್ಕೆ? ಅತ್ತ ಲಕ್ಷ್ಯಗೊಡಲಿಕ್ಕೆ ನಮ್ಮ ವಿಲಾಸಗಳಲ್ಲಿ ನಮಗೆ ಆಸ್ಪದವೆಲ್ಲಿ ದೊರೆಯುವದು? ಆದರೆ ಆಯ್ಯೋ! ಈ ಸುಡುಗಾಡು ಮುಳ್ಳು ಇನ್ನೂ ಮೂರಕ್ಕೇಕೆ ಹೋಗೆಲೊಲ್ಲಗು? ಎಂದು ತನ್ನಲ್ಲಿಯೇ ಆಲೋಚಿಸುತ್ತಿದ್ದನು.

ಇತ್ತ ನರಸನಗೌಡನು ಏನು ಮಾಡುತ್ತಿರುವನೆಂಬದನ್ನು ತಿಳಿಯಲು ನಮ್ಮ ವಾಚಕರು ಆತುರರಾಗಿರುವರಲ್ಲವೇ? ಛೀ, ಅವನ ಹೆಸರನ್ನೇ ಎತ್ತಬೇಡಿರಿ. ಇಂದು ಅವನ ಮನಸ್ಸಿನಲ್ಲಿ ಬಹು ಭಯಂಕರ ವಿಚಾರಗಳು ಮನೆಮಾಡಿಕೊಂಡಿವೆ. ಇಂದು ರಾತ್ರಿಯಲ್ಲಿ ಅವನು ಯಾವ ಭಯಂಕರ ನೀಚಕೃತ್ಯ ಮಾಡಲೆತ್ನಿಸಿರುವನೆಂಬದು ಬಾಯಿಂದ ಹೇಳಲಿಕ್ಕೆ ಸಾಧ್ಯವಿಲ್ಲ; ಲೆಕ್ಕಣಿಕೆಯಿಂದ ಬರೆಯಲು ಶಕ್ಯವಿಲ್ಲ. ಇಂದಿನ ರಾತ್ರಿಯಲ್ಲಿ ಅವನು.... ಛೀ-ಛೀ, ಅದನ್ನುಚ್ಚರಿಸಲಿಕ್ಕೆ ಹೆದರಿಕೆಯುಂಟಾಗುತ್ತಿದೆ; ಮೈಮೇಲೆ ಮುಳ್ಳುಗಳೇಳುತ್ತಿವೆ. ಬೇಡ-ನರಸನಗೌಡನ ಆ ವಿಕೃತ ಶಾಂತ ಮುಖ ಮುದ್ರೆಯನ್ನು ಇಂದು ನೋಡದಿರುವುದೇ ಹಿತಕರವು. ದೇವಾ,-ಪರಮೇಶ್ವರಾ, ಇಂದಿನ ರಾತ್ರಿಯಲ್ಲಿ ಅವನಿಂದ ಯಾವ ದುಷ್ಟ ಕೃತಿಯೂ ಘಟಿಸದಂತೆ ಮಾಡು. ಅಂದರೆ ನಿನಗೆ............ರ........ಬಲಿಗೊಡುವೆವು.

ರಾತ್ರಿಯ ಮೂರರ ಸಮಯಕ್ಕೆ ಸರಸಕ್ಕನು ಹಾಸಿಗೆಯಿಂದೆದ್ದು, ಕಳ್ಳ-ಬೆಕ್ಕಿನ-ಹೆಜ್ಜೆಗಳಿಂದ ಮೇಲಂತಸ್ತಿನ ಪಾವಟಿಗೆಗಳನ್ನಿಳಿದು ಕೆಳಗೆ ಬರಹತ್ತಿದಳು. ದೀಪಕ್ಕಾಗಲಿ ಗಡಿಯಾರದ ಕಡೆಗೆ ನೋಡುವಂತಿರಲಿಲ್ಲ. ಯಾಕೆಂದರೆ ಎಲ್ಲ ವ್ಯವಹಾರವೂ ನರಸನಗೌಡನಿಗೆ ತಿಳಿಯದ ಹಾಗೆ-ಕಳವಿನಿಂದಲೇ ಆಗಬೇಕಾಗಿತ್ತು. ಎದ್ದು ಪಾವಟಿಗೆಗಳ ಕಡೆಗೆ ಹೋಗುವಾಗ ಯೋಗಿಗಳಂತೆ ಅವಳು ತನ್ನ ಶ್ವಾಸವನ್ನು ಕೂಡ ನಿರೋಧಿಸಿಕೊಂಡು ನಡೆದಿದ್ದಳು. ಅವಳು ಬಹು ಕೌಶಲ್ಯದಿಂದ-ಜಾಗ್ರತೆಯಿಂದ-ಸ್ವಲ್ಪವೂ ಸಪ್ಪಳವಾಗದಹಾಗೆ ಮೇಲಂತಸ್ತಿನ ಬಾಗಿಲು ತೆರೆದಳು; ಮತ್ತು ಹೊರಗೆ ಬಂದು ಅಷ್ಟೇ-ಅದಕ್ಕೂ ಹೆಚ್ಚು-ಎಚ್ಚರಿಕೆಯಿಂದ ಬಾಗಿಲವನ್ನಿಕ್ಕಿಕೊಂಡಳು. ತನ್ನ ಚಲನವಲನದಿಂದ ಗಾಳಿಯ ಸ್ತಬ್ಧತೆಗೆ ಕೂಡ ಧಕ್ಕೆ ಹತ್ತಬಾರದೆಂದು ಅವಳ ಆಗಿನ ಮನೋದಯವಾಗಿತ್ತು.

ಆದರೆ ಅವಳ ಆ ಪ್ರಬಲೇಚ್ಛೆಯು ದೈವೀ ಸಂಕಲ್ಪದ ಮೂಲಕ ಅಂದು ಸಫಲವಾಗುವಂತಿರಲಿಲ್ಲ. ಯಾಕೆಂದರೆ ನರಸನಗೌಡನು ಅವಳ

ಪಾಳತಿಯು ಮೇಲಿದ್ದನು. ಆಕೆಯು ಭಾವಿಸಿಕೊಂಡಂತೆ ಅವನಿಗೆ ನಿದ್ದೆ ಹತ್ತಿರಲಿಲ್ಲ. ಅವಳು ಎದ್ದು ಮೆಲ್ಲಗೆ ಹೊರಬಿದ್ದೊಡನೆ ಅವನೂ ಎದ್ದನು; ಹಾಗು ಆ ಕಾರ್ಗತ್ತಲೆಯಲ್ಲಿ ಅವಳನ್ನನುಸರಿಸಿ ಮೆಲ್ಲಗೆ ಕಳ್ಳಹೆಜ್ಜೆಯನ್ನಿಕ್ಕುತ್ತ ನಡೆದನು. ದಾರಿಯಲ್ಲಿ ಅವನು ಕ್ಷಣಕಾಲ ಒಂದಿಷ್ಟು ಮರೆಗೆ ನಿಂತು ಆಲೋಚಿಸಿದನು. ಅವನ ಮುಖಚರ್ಯೆಯು ಮೇಲೆ ಇನ್ನೂ ಆ ಮೊದಲಿನ ದಿನದ ನಿತಾಂತ ಶಾಂತತೆಯು ಹೊಳೆಯುತ್ತಿತ್ತು. ಬೇಡ, ಅಂಥ ಆ ಕಠೋರ-ದುಷ್ಟ-ನೀಚ-ಶಾಂತತೆಯು ಎಂದೆಂದಿಗೂ ಬೇಡ. ಅಂಥ ಆ ನಿತಾಂತ ಶಾಂತತೆಯು ಬಹು ಅನರ್ಥಕರವಾದದ್ದು. ನರಸನಗೌಡನು ಮತ್ತೆ ಸರಸಕ್ಕನ ಹಿಂದಿಂದೆ ತುಸ ಅಂತರದಿಂದ ಸಾಗಹತ್ತಿದನು.

ಸರಸಕ್ಕನು ರಂಗನಾಥರಾಯು ಡಾಕ್ಟರನ ಆಸ್ಪತ್ರೆಗೆ ತಲುಪಿದಳು. ನರಸನಗೌಡನೂ ಆಸ್ಪತ್ರೆಯ ಬಳಿಗೆ ಹೋದನು. ಡಾಕ್ಟರನು ಇದುವರೆಗೂ ಅಲ್ಲಿಗೆ ಬಂದಿರಲಿಲ್ಲ. ಆದರಿಂದ ಸರಕ್ಕನು ತನ್ನ ಬಳಿಯ ಕೈಯಿಂದ ಕೀಲಿಯನ್ನು ತೆಗೆದು, ಮೆಲ್ಲಗೆ ಬಾಗಿಲ ತೆರೆದಳು; ಹಾಗು ಒಳಹೊಕ್ಕಳು ಅವಳ ಹಿಂದೆಯೇ ನರಸನಗೌಡನೂ ಆ ಕತ್ತಲೆಯಲ್ಲಿ ಲಗುಬಗೆಯಿಂದ ಒಳಹೊಕ್ಕನು. ಅವನು ಬಹು ಮೆತ್ತನ್ನ ಹೆಜ್ಜೆಯಿಂದ ನಡೆಯುತ್ತಿದ್ದ ಕಾರಣ ಕೇವಲ ಶಾಂತವಾದ ಆ ಸಮಯದಲ್ಲಿ ಅವನ ಕಾಲಸಪ್ಪಳವು ಕೂಡ ಸರಸಕ್ಕನಿಗೆ ಕೇಳಿಸಲಿಲ್ಲ ಅಂದು ಹೆಚ್ಚಾಗಿ ಕಾರ್ಗತ್ತಲೆ ಬಿದ್ದಿತ್ತೆಂತೇ ವಿಹಿತವಾಯಿತು. ಇಲ್ಲದಿದ್ದರೆ ಒಬ್ಬರನ್ನೊಬ್ಬರು ದೃಷ್ಟಿಸಿದಾಗಲೆ ಸರಸಕ್ಕನ ರುಂಡವು ನರಸನಗೌಡನ ಕೈಯೊಳಗಿನ ಕತ್ತಿಯಿಂದ ಧರೆಗಿಳಿಯದಿರುತ್ತಿರಲಿಲ್ಲ.

ನರಸನಗೌಡನು ಆ ಆಸ್ಪತ್ರೆಯ ಒಳಗೆ ಕಾಲಿಟ್ಟನೋ ಇಲ್ಲವೋ ಇಷ್ಟರಲ್ಲಿ ಡಾಕ್ಟರ ರಂಗನಾಥರಾಯನೂ ಧಾವಿಸುತ್ತ ಹೊರಗಿನಿಂದ ಒಳಗೆ ಪ್ರವೇಶಿಸಿದನು; ಹಾಗು ಮೃದುಮಧುರ ಸ್ವರದಿಂದ—ಅತಿಗೀ,-ಅತಿಗೀ, ಎಂದು ಎರಡು ಸಾರೆ ಕರೆದನು. ಸರಸಕ್ಕನು—ಹೂ! ಎಂದಿಷ್ಟೇ ಉತ್ತರವನ್ನಿತ್ತಳು. ಡಾಕ್ಟರನು ಒಳಗೆ ಹೊಕ್ಕೊಡನೆ ಬಾಗಿಲವನ್ನಿಕ್ಕಿ ಒಳಗಿನಿಂದ ಚಿಲಕವನ್ನು ಹಾಕಿಕೊಂಡನು. ಇಷ್ಟರಲ್ಲಿ ನರಸನಗೌಡನು ಗೋಡೆಗೆ ತೀರ ಸಮೀಪವಾಗಿ ನಿಲ್ಲಿಸಲ್ಪಟ್ಟಿದ್ದ ಒಂದು ಭವ್ಯವಾದ ಕಪಾಟಿನ ಹಿಂದೆ

ಸರಿದು ನಿಂತನು. ಗೌಡನು ಡಾಕ್ಟರನ ಆ ಆಸ್ಪತ್ರಿಗೆ ಈ ಮೊದ ಲೆಷ್ಟೋ ಸಾರೆ ಬಂದವನಾಗಿದ್ದನು. ಅದರಿಂದ ಒಳಗೆ ಹೊಕ್ಕೊಡನೆ ಅಡಗಿ ಕೂಡ್ರಲಿಕ್ಕೆ ಎಲ್ಲೆಲ್ಲಿ ಅನುವಿದೆಯೆಂಬದನ್ನು ಅವನು ತಿಳಿದವನಾಗಿ ದ್ದನು. ಅಲ್ಲದೆ ಅವನು ಇಂಥಲ್ಲಿಯೇ ಅಡಗಿಕೊಂಡಿರಬೇಕೆಂಬದನ್ನು ಈ ಮೊದಲೇ ಗೊತ್ತುಪಡಿಸಿದಂತೆಯೂ ತೋರಿತು. ಅಂತೇ ಅವನು ಆ ಔಷಧಾಲಯವನ್ನು ಪ್ರವೇಶಿಸಿದೊಡನೆ ಅಲ್ಪಾವಧಿಯಲ್ಲೇ ಅಡಗಿಕೊಂಡು ನಿಂತನು. ಡಾಕ್ಟರನು ಬಂದೊಡನೆ ವಿದ್ಯುತ್ತಿನ ಕೀಲವನ್ನೊತ್ತಿ ದೀಪ ಹಚ್ಚುವನೆಂಬದು ಅವನಿಗೆ ಮೊದಲೇ ಗೊತ್ತಿದ್ದದರಿಂದ ಅವನು ಅವರಿಗೆ ಕಾಣದ ಹಾಗೆ ಆ ಭವ್ಯವಾದ ಕಪಾಟಿನ ಹಿಮ್ಮಗ್ಗಲು ನಿಂತುಕೊಂಡನು. ನರಸನಗೌಡನ ತರ್ಕದಂತೆ ಡಾಕ್ಟರನು ಬಾಗಿಲಿಗೆ ಚಿಲಕಹಾಕಿದೊಡನೆ ಕೀಲವನ್ನೊತ್ತಿದನು. ವಿದ್ಯುದ್ದೀಪವು ಪ್ರಕಾಶಮಾನವಾಗಿ ಬೆಳಗಹತ್ತಿ ತು. ಈ ಆಸ್ಪತ್ರಿಯಲ್ಲಿ ತಾವು ಮೂರುಜನರಿರುವೆವೆಂಬದು ಗೌಡನ ಹೊ-ರತು ಆ ಪ್ರಣಯಿಜೋಡಿಗೆ-ಸರಸಕ್ಕ-ಡಾಕ್ಟರರಿಗೆ ಗೊತ್ತಿರಲಿಲ್ಲ. ಅಂಥ ದುಷ್ಟಕಲ್ಪನೆಯು ಆ ನವತರುಣ ಆಷಕ-ಮಾಷಕ ಪಾತ್ರಗಳ ಮನಸ್ಸನ್ನು ಸೋಂಕುವ ಬಗೆಯಾದರೂ ಹೇಗೆ?

ಆಯಿತು. ಪ್ರಣಯಿಯುಗ್ಮಗಳು ಒತ್ತಟ್ಟಿಗೆ ಒಂದು ಗೂಡಿನಲ್ಲಿ ಕಲೆ ತವು. ತಾರುಣ್ಯದಿಂದ ಮತ್ತನಾದ ಡಾಕ್ಟರ ರಂಗರಾಯನು ನವಯೌವ ನದಿಂದ ಬೆಳಗುತ್ತಿರುವ ಸರಸಕ್ಕನೊಡನೆ ಆ ನಿರ್ಜನವಾದ ಆಸ್ಪತ್ರಿಯಲ್ಲಿ ಬಂದುನಿಂತನು. ಆಗ ಎಲ್ಲ ಕಡೆಗೂ ನಿಶ್ಶಬ್ದ. ಬೆಳಗಿನ ಝಾವದ ಕಾಲ. ಕಿಟಕಿಯೊಳಗಿಂದ ಬರುವ ಮಂಜುಲವಾದ ನಸುಗಾಳಿ. ಆಗ ಅಲ್ಲಿ ಅವನೂ ಒಬ್ಬನೇ. ಆಕೆಯೂ ಒಬ್ಬಳೇ. ಇನ್ನು ತಡವೇಕೆ? ಇಷ್ಟು ದಿನಗಳವರೆಗಿನ ಉಭಯತರ ಮನೋವಾಂಛಿತಕ್ಕೆ ಇನ್ನೇಕೆ ತಡ? ಆದರೆ......ಆದರೆ...

ಅವರಿಬ್ಬರೂ ಆಸ್ಪತ್ರಿಯಲ್ಲಿ ಹೊಕ್ಕು ೧೦-೧೫ ನಿಮಿಷಗಳಾದರೂ ಇಬ್ಬರೂ ಸ್ತಬ್ಧರಾಗಿಯೇ ಇದ್ದರು. ಡಾ. ರಂಗರಾಯನು ಇನ್ನೂ ನಿಂತೇ ಇದ್ದನು. ಸರಸಕ್ಕನೂ ನಿಂತುಕೊಂಡಿದ್ದಳು. ಇಬ್ಬರೂ ಒಬ್ಬರೊಬ್ಬರ ಕಡೆಗೆ ಟಕಮಕ ನೋಡುತಲಿದ್ದರು; ಆದರೆ ಒಬ್ಬರೂ ಮಾತಾಡಲೊಲ್ಲರು. ಮೊದಲು ಯಾರು ಮಾತಾಡಬೇಕೆಂಬ ಬಗ್ಗೆ ಅವರೀರ್ವರೂ ಆಲೋಚಿಸು ತ್ತಿರುವಂತೆ ಭಾಸವಾಗುತಲಿತ್ತು. ಕಡೆಗೆ ಡಾಕ್ಟರನು ನಿಂತಲ್ಲಿಂದ ತುಸ

ಮುಂದಕ್ಕೆ ಹೋಗಿ ಅಲ್ಲಿಯ ಒಂದು ಗೂಟದ ಮೇಲೆ ತನ್ನ ಓವ್ಹರಕೋಟನ್ನು ತೆಗೆದಿಟ್ಟನು; ಹಾಗು ವಿದ್ಯುದ್ದೀಪದ ಪ್ರಖರ ಪ್ರಕಾಶದ ಗ್ಲೋಬಿನ ಮೇಲೆ ಸಮೀಪದಲ್ಲಿಯೇ ಇದ್ದ ಹಸರುಬಣ್ಣದ ಜಾಳಿಗೆಯನ್ನು ಎಳೆದನು. ಅದರಿಂದ ಆ ಉಗ್ರ ಪ್ರಕಾಶವು ಬಹುಮಟ್ಟಿಗೆ ಮಂದವಾಯಿತು. ಪ್ರತಿಯೊಂದು ಬಗೆಯ ಪಾಪಕೃತ್ಯಕ್ಕೂ ಪ್ರಕಾಶದ-ಬೆಳಕಿನ-ಅಂಜಿಕೆಯೇಕಾಗಬೇಕೋ ದೇವರೇ ಬಲ್ಲ!

ಬಳಿಕ ಡಾ. ರಂಗರಾಯನು ಸರಸಕ್ಕನ ಬಳಿಗೆ ಬರಹತ್ತಿದನು. ಹತ್ತರ ಬಂದು ಅವನು ಅವಳ ಕೈ ಹಿಡಿಯುವ ಬೇತಿನಲ್ಲಿದ್ದನು; ಆದರೆ ಸರಸಕ್ಕನು ಅವನ ಕಡೆಗೆ ಕಿಡಿಗಣ್ಣಿನಿಂದ ನೋಡಿ ಸರಿದು ನಿಲ್ಲಲು ಸೂಚಿಸಿದ್ದರಿಂದ ಅವನು ತುಸ ಹಿಂದಕ್ಕೆ ಸರಿದು ನಿಂತನು. ಸರಸಕ್ಕನು ದೀಪದ ಕಡೆಗೆ ತುಸ ಮುಂದೆ ಸರಿದು ನಿಂತಳು; ಹಾಗು ಡಾಕ್ಟರನನ್ನುದ್ದೇಶಿಸಿ—ಡಾಕ್ಟರರೇ, ತಾವು ತಡಮಾಡಬಹುದೆಂದು ನನಗನಿಸುತ್ತಿತ್ತು; ಆದರೆ ಒಳ್ಳೇ ಸಮಯಕ್ಕೆ ಬಂದಿರಿ. ನಿಮ್ಮಿಂದ ಸ್ವಲ್ಪವೂ ತಡವಾಗಲಿಲ್ಲ.

ಡಾಕ್ಟರ—ಇಲ್ಲ. ತಡಮಾಡಿ ಏಕೆ ಬರಲಿ? ಮೂರು ಯಾವಾಗ ಹೊಡೆದೀತೋ ಎಂಬ ದಾರಿಯನ್ನೇ ನೋಡುತಲಿದ್ದೆನು.

ಡಾಕ್ಟರರೇ, ನಿಮಗೆ ಒಂದು ಸಂಗತಿಯನ್ನು ತಿಳಿಸಬೇಕೆಂದಿರುತ್ತೇನೆ

ತಿಳಿಸಿರಿ. ಅದಕ್ಕೇಕೆ ತಡ?

ನಿಮ್ಮ ಬಳಿಗೆ ಒಂದು ಮಾತಿನಬಗ್ಗೆ ಯಾಚಿಸಬೇಕಾಗಿದೆ.

ಬೇಕಾದ್ದನ್ನು ಕೇಳಿಕೊಳ್ಳಿರಿ. ಅದಕ್ಕೇಕೆ ಸಂಕೋಚ? ನಾನೇ ನಿಮ್ಮವನಾದ ಬಳಿಕ ನನ್ನದೆಲ್ಲವೂ ನಿಮ್ಮದೇ.

ತಾವು ನನ್ನನ್ನು ಪ್ರೀತಿಸುವಿರಲ್ಲವೇ?

ಇದನ್ನು ಬಾಯಿಂದ ಹೇಳಬೇಕೇತಕ್ಕೆ? ಅತಿಗೀ, ನಿಮ್ಮ ಪ್ರೇಮಕ್ಕಾಗಿ-ಈ ಅಭಾಗಿ ರಂಗನು ಈಗೆರಡು ತಿಂಗಳುಗಳಿಂದ-ನಿಮ್ಮನ್ನು ಎಲ್ಲಕ್ಕೂ ಮೊದಲು ನೋಡಿದಾಗಿನಿಂದ-ಕೊರಗಹತ್ತಿರುತ್ತಾನೆ.

ಆದರೆ ಡಾಕ್ಟರರೇ, ನಾನು ತಮ್ಮನ್ನೇನಾದರೂ ಕೇಳಿದರೆ ತಾವದನ್ನು ನನಗೆ ಕೊಡುವಿರಷ್ಟೇ?

ಅತಿಗೀ, ತಾವು ಬೇರೆ ವಸ್ತುವನ್ನೇ ಏಕೆ? ನನ್ನ ಪ್ರಾಣವನ್ನು ಕೇಳಿದರೆ ಕೂಡ ನಾನದನ್ನು ತಮಗಾಗಿ ನಿವಾಳಿಸಿ ಬಿಸುಟುವೆನು. ಪ್ರಾಣ

ಕ್ಕಿಂತಲೂ ಈ ಜಗತ್ತಿನಲ್ಲಿ ಮತ್ತಾವ ಪ್ರಿಯವಸ್ತುವಿದೆ, ಹಾಗು ನಾನ ದನ್ನು ನಿಮಗಾಗಿ ತಂದುಕೊಡಬೇಕಾಗಿದೆ? ತಿಳಿಸಿರಿ-ತಿಳಿಸಿರಿ ಬೇಗನೆ.

ನನ್ನ ಯಾಚನೆಯಿಂದ ತಮಗೆ ಕೆಡಕೆನಿಸದಷ್ಟೇ?

ಛೇ, ಛೇ, ನನ್ನ ವಿಷಯವಾಗಿ ನಿಮಗಿಷ್ಟೇಕೆ ಅನುಮಾನ?

ನಿಮಗೆ ಸಿಟ್ಟು ಬಂದರೆ?

ಅತಿಗೀ, ತಮ್ಮ ಮಾತಿಗೆ ಸಿಟ್ಟೇ? ಶಾಂತಂ ಪಾಪಂ!!

ಹಾಗಾದರೆ ಗಟ್ಟಿಧೈರ್ಯಮಾಡಿ ಕೇಳಲ್ಯಾ?

ಓಹೋ, ಅವಶ್ಯವಾಗಿ ಕೇಳಿರಿ.

ಕೇಳಲ್ಯಾ?

ಅತ್ಯವಶ್ಯವಾಗಿ ಕೇಳಿರಿ.

ನೋಡಿರಿ ಡಾಕ್ಟರರೇ, ಕೇಳಲ್ಯಾ?

ಕೇಳಿರಿ-ಕೇಳಿರಿ. ನಿಸ್ಸಂಶಯವಾಗಿ ಕೇಳಿಕೊಳ್ಳಿರಿ.

"ಇವಳು ಅಂಥ ಭಾರಿಬೆಲೆಯ ಅದಾವ ವಸ್ತ್ರ-ಒಡವೆಯನ್ನು ಕೇಳಿ ಯಾಳು? ಬಹುದೊಡ್ಡ ಬೆಲೆಯದಿರಬಹುದೆಂದೇ ಇವಳಿಷ್ಟು ಖಟ್ಟನಿಟ್ಟಾಗಿ ಕೇಳುತ್ತಿರುವಳು. ಕೇಳು. ಬೇಕಾದಷ್ಟು ಬೆಲೆಯದಿದ್ದರೂ-ನನ್ನ ಶಕ್ತಿ ಮೀರಿದ್ದರೂ ಕಡೆಗೆ ಈ ನನ್ನ ಆಸ್ಪತ್ರಿಯನ್ನು ಒತ್ತಿಹಾಕಿ ಇಲ್ಲವೆ ಮಾರಿ ಯಾದರೂ ನಿನ್ನ ಮನದಿಚ್ಛೆಯನ್ನು ಪೂರೈಸಲಿಕ್ಕೆ ಈ ಡಾಕ್ಟರ ರಂಗನಾಥ ರಾಯನು ಹಿಂದೆಗೆಯಲಿಕ್ಕಿಲ್ಲ" ಎಂದು ಅವನು ತನ್ನೊಳಗೇ ಆಲೋಚಿ ಸುತ್ತ ನಿಂತುಕೊಂಡಿದ್ದನು.

ಅಷ್ಟರಲ್ಲಿ ಸರಸಕ್ಕನು— ಡಾಕ್ಟರ..........

ಡಾಕ್ಟರನು ಚಿತ್ತಗೊಟ್ಟು ಲಾಲಿಸಹತ್ತಿದನು. ಯಾವುದೊಂದು ಮಹತ್ವದ ಪರೀಕ್ಷೆಯ ರಿಝಲ್ಟನ್ನು ಕೇಳಲಿಕ್ಕೆ ನಿಂತಂಥ ವಿದ್ಯಾರ್ಥಿಗಳ ಸ್ಥಿತಿಯು ಹೇಗಾಗಿರುತ್ತದೋ ಹಾಗೆಯೇ ಆಗ ಆ ನಮ್ಮ ಡಾ. ರಂಗ ರಾಯನ ಸ್ಥಿತಿಯಾಯಿತು.

ಡಾಕ್ಟರರೇ, ಇಂದು ನೀವು ನನಗೊಂದು ಪಾರಿತೋಷಕವನ್ನು ಕೊಡಿರಿ.

ಅದಾವ ಕಾಣಿಕೆಯು ನಿಮಗೆ ಬೇಕಾಗಿದೆ ಅತಿಗೀ? ಎಂದು ಹಿಗ್ಗೀ ಅಧೀರಚಿತ್ತದಿಂದ ಡಾಕ್ಟರನು ಕೇಳಿದನು.

ಡಾಕ್ಟರರೇ, ಇಂದಿನಿಂದ ನೀವು ನಿಮ್ಮ ಪಾಪೀ ಮುಖವನ್ನು ನನಗೆ ತೋರಿಸಬೇಡಿರಿ. ಇಷ್ಟೇ ನನ್ನ ಬೇಡಿಕೆಯು.

ಸರಸಕ್ಕನ ಈ ಮಾತು ಕೇಳಿ ಡಾಕ್ಟರನಿಗೆ ವಿದ್ಯುತ್ತಿನ ಧಕ್ಕಿ ಬಡಿದಂತಾಯಿತು. ಅವನ ಸೊಂಡಿಯೊಣಗಿ ಒಮ್ಮೆಲೆ ಕಪ್ಪಿಟ್ಟಿತು. ಆಕಾಶವೇ ತನ್ನ ಮೇಲೆ ಕಡಕೊಂಡು ಬಿದ್ದಂತೆ ಅವನಿಗೆ ಭಾಸವಾಯಿತು.

ಮರೆಗೆ ನಿಂತು ಇವರೀರ್ವರ ಭಾಷಣವನ್ನಾಲಿಸುತ್ತಿದ್ದ ಸರಸನ ಗೌಡನಿಗೂ ತನ್ನ ಹೆಂಡತಿಯ ಆ ನುಡಿ ಕೇಳಿ ದಿಗಿಲು ಬಿದ್ದಿತು. ಅವನಿಗೆ ಒಳ್ಳೇ ಆಶ್ಚರ್ಯವೆನಿಸಿದ್ದರಿಂದ ಅವನು ಶ್ವಾಸವನ್ನು ಕೂಡ ನಿರೋಧಿಸಿ, ಅವರ ಭಾಷಣವನ್ನು ಆಲಿಸಹತ್ತಿದನು.

---

## ಏಳನೇ ಸರಳನೋಟ!

ಸರಸಕ್ಕನು ಪುನಃ ಮಾತಾಡಹತ್ತಿದಳು:—ಡಾಕ್ಟರರೇ, ಈವರೆಗೆ ನಿಮ್ಮಿಂದ ಬಹು ದೊಡ್ಡ ತಪ್ಪುಗಳನೇಕಾಗಿರುತ್ತವೆ. ನಿಮ್ಮಂತೆ ನನ್ನಿಂದಲೂ ಈವರೆಗೆ ದೊಡ್ಡ ತಪ್ಪಾಗಿವೆ; ಆದರೆ ಆದದ್ದಾಗಿ ಹೋಯಿತು. ಆ ಬಗ್ಗೆ ಹಳಹಳಿಸುತ್ತ ಮತ್ತೆ ಅಂಥ ತಪ್ಪಿಗೆ ನಾವೀರ್ವರೂ ಗುರಿಯಾಗಬಾರದು. ಅಂತೇ ಇಂದಿನಿಂದ ನೀವು ನಿಮ್ಮ ಮುಸುಡಿಯನ್ನು ನನಗೆ ತೋರಿಸಬಾರದು.

ಡಾಕ್ಟರ—"ಅಕ್ಕಿಗೀ, ಸರಸಕ್ಕಾ, ನೀನು ಹೀಗೇಕೆನ್ನುವೆ? ನನ್ನಿಂದ ಯಾವ ಅಪರಾಧವಾಗಿದೆ?........" ಎಂದು ಕೈಗೆ ಬಂದ ತುತ್ತು ಬಾಯಿಗೆ ಬರಲೊಲ್ಲದಲ್ಲಾ, ಎಂಬ ಹೊಟ್ಟೆಯುರಿಯಿಂದ ನುಡಿದನು.

ಅಪರಾಧವೇನೆಂದು ಕೇಳುವಿರಲ್ಲವೆ? ಮಹಾಪರಾಧವಾಗಿದೆ; ಆದರೆ ನಾನೀಗ ಆ ಬಗ್ಗೆ ಆಲೋಚಿಸುವದಿಲ್ಲ. ನನ್ನಿಂದಲೂ ಅಂಥ ಮಹಾಪರಾಧವೇ ಆಗಿದೆ. ಅಂತೇ ನಾವೀರ್ವರೂ ಒಬ್ಬರಿಗೊಬ್ಬರು ಭೆಟ್ಟಿಯಾಗಕೂಡದು.

ಅದೇಕೆ?

ನಾನಿದನ್ನು ನನ್ನ ಗುರುವಿನ ಅಪ್ಪಣೆಯಮೇರೆಗೆ ನಿಮಗೆ ತಿಳಿಸುತ್ತೇನೆ.

ಡಾಕ್ಟರ—ನೀವಿದನ್ನು ನಿಮ್ಮ ಗುರ್ವಾಜ್ಞೆಯಂತೆ ಹೇಳುವಿರಾ?

ಸರ—ಅಹುದು.

ನಿಮ್ಮ ಗುರುಗಳು ನಿಮಗೆಂದು ಭೆಟ್ಟಿಯಾಗಿದ್ದರು? ಅವರೇನೆಂದು ಹೇಳಿರುವರು?

ಅವರು ನನಗೆ ನಿನ್ನಿನ ರಾತ್ರಿಯಲ್ಲಿ ಭೆಟ್ಟಿಯಾಗಿ, ಇಂದಿನಿಂದ ನಾನು ನಿಮಗೆ ಭೇಟಿಯಾಗಬಾರದೆಂದೂ ನಿಮ್ಮಗೂಡ ಯಾವ ವ್ಯವಹಾರವನ್ನೂ ಇಡಕೂಡದೆಂದೂ ಕಟ್ಟಪ್ಪಣೆ ಮಾಡಿರುತ್ತಾರೆ.

ಸರಸಕ್ಕನ ಈ ಮಾತು ಕೇಳಿ ಡಾಕ್ಟರ-ರಂಗನಾಥನು ಗೊಂದಲ ದಲ್ಲಿ ಬಿದ್ದನು. ನಿನ್ನಿನ ರಾತ್ರಿಯಲ್ಲಿ ಈಕೆಯ ಗಂಡನು ಇವಳನ್ನು ಚನ್ನಾಗಿ ತಿಳಿಸಿದಂತೆ ಕಾಣುತ್ತದೆ. ಆದರಿಂದಲೇ ಇವಳೀಗ ಹೀಗೆ ಅವನ ಅಂಜಿ ಕೆಯ ಮೂಲಕ ಹೇಳಹತ್ತಿದ್ದಾಳೆ, ಎಂದು ಅವನು ತನ್ನ ಮನದಲ್ಲಿಯೇ ಅಂದುಕೊಂಡನು.

ಇತ್ತ ಮರೆಯಲ್ಲಿ ನಿಂತುಕೊಂಡು ಇವರೀರ್ವರ ಸಂಭಾಷಣವನ್ನು ಕೇಳುತ್ತಿದ್ದ ಸರಸಕ್ಕನ ಗಂಡನಾದ ಸರಸನಗೌಡನೂ ತನ್ನ ಮನಸ್ಸಿನಲ್ಲಿ ಸರಸಕ್ಕನ ಗುರುವಿನ ಬಗ್ಗೆ ಆಲೋಚಿಸತೊಡಗಿದನು. ಈ ನಿನ್ನಿನ ಹುಡು ಗಿಯು-ಇಂಥ ಊರ ಬಸವಿಯು-ಗುರುವನ್ನು ಬೇರೆ ಗಂಟು ಹಾಕಿಕೊಂಡಿ ರುವಳಲ್ಲವೆ? ಈ ಹೊಯ್ಮಾಲಿಯು ಏನೇನು ಗೊಂದಲ ನಡೆಸಿರುವಳೋ. ದೇವರಿಗೇ ಗೊತ್ತು? ದೇವಾ, ನನಗೆ ಈ ಶಟವಿ-ಎರಡನೇ ಹೆಂಡತಿಯನ್ನು ಮಾಡಿಕೊಳ್ಳುವ ದುರ್ಬುದ್ಧಿಯನ್ನೇಕೆ ಕೊಟ್ಟೆ? ನೀನಾದರೂ ಏನು ಮಾಡೀ? ನನ್ನ ಪೂರ್ವಸಂಚಿತದಂತೆ ನನಗಾಬುದ್ಧಿಯಾಗಿ ಕಡೆಗೆ ಈ ಅವಮಾನವನ್ನು ಸಹಿಸಬೇಕಾಯಿತು. ಇರಲಿ. ಇವಳ ಗುರುವಾದರೂ ಯಾವನವನು? ಒಟ್ಟನಲ್ಲಿ ನೋಡುತ್ತಿರಲಿಕ್ಕೆ ಆ ಈಕೆಯ ಗುರುವು ಅಂಥ ಇಂಥ ಹೀನ ನಡತೆಯವನಾಗಿ ತೋರುವದಿಲ್ಲ ಯಾಕಂದರೆ ಇವಳಂತಹ ಉಚ್ಛೃಂ-ಖಲ ವೃತ್ತಿಯ ನವತರುಣಿಯ ಮನಸ್ಸನ್ನು ಪರಪುರುಷನ ಜಾಲದಿಂದ ಬಿಡಿಸಲಿಳಿಸಿದ ಆ ಗುರುವು ಶ್ರೇಷ್ಠನೇ ಇರಲಿಕ್ಕೆ ಬೇಕು, ಎಂದು ಗೌಡನು ಯೋಚಿಸುತ್ತಿದ್ದನು.

ತುಸ ಹೊತ್ತಿನ ಮೇಲೆ ಡಾಕ್ಟರನು ನಿರಾಶಾಯುಕ್ತನಾಗಿ—ಅತಿಗೇ, ನಿಮ್ಮ ಆ ಗುರುವು ಯಾರು? ಅವನ ಹೆಸರೇನು?

ಸರಸಕ್ಕ—ಡಾಕ್ಟರರೇ, ನನ್ನ ಗುರುವು ನಿಮ್ಮ ಪರಿಚಯದವನೇ ಇದ್ದು, ಅವನು ನನಗೆ ಯಾವಾಗ ಭೆಟ್ಟಿಯಾದನು, ಅವನ ಹೆಸರೇನು ಎಂಬದು ನಿಮಗೆ ಅರಿಯದ ವಿಷಯವಾಗಿರುವದಿಲ್ಲ.

ಡಾ:—ಏನಂದಿರಿ? ಅವನು ನನ್ನ ಪರಿಚಯದವನೆಂದಿರಾ?

ಸರ—ಅಹುದು.

ಅದನ್ನು ಕೇಳಿ, ಇವಳ ಗುರುವೆಂದರೆ ಇವಳ ಗಂಡನೇ ಎಂಬದು ಡಾಕ್ಟರನ ಮನವರಿಕೆಯಾಯಿತು

ಇತ್ತ ನರಸನಗೌಡನು ಹೆಂಡತಿಯ ಮಾತನ್ನು ಹೆಚ್ಚು ಲಕ್ಷ್ಯಗೊಟ್ಟು ಕೇಳಹತ್ತಿದನು.

ಡಾಕ್ಟರ:—ಅತಿಗೀ-ಸರಸಕ್ಕಾ, ನನ್ನನ್ನು ಗೊಂದಲದಲ್ಲೇಕೆ ಕೆಡಹುವಿರಿ? ನಿಮ್ಮ ಗುರುವಾರೆಂಬದನ್ನು ನನಗೆ ಸ್ಪಷ್ಟವಾಗಿ ತಿಳಿಸಿರಿ. ನನ್ನೊಡನೆ ಸಂಬಂಧವಿಡಕೂಡದೆಂದು ನಿಮಗೆ ಹೇಳಿದವನಾರೆಂಬದು ನನಗೆ ತಿಳಿಯಲಿ.

ಸರಸಕ್ಕ:—ಡಾಕ್ಟರರೇ, ನೀವೇ ನನ್ನ ಪರಮ ಗುರುಗಳು. ನೀವೇ ನಿಮ್ಮೊಡನೆ ಸಂಬಂಧವಿಡಬಾರದೆಂದು ನನಗೆ ಕಟ್ಟಪ್ಪಣೆ ಮಾಡಿರುತ್ತೀರಿ.

ಇದನ್ನು ಕೇಳಿ ಡಾಕ್ಟರನು ತೆಪ್ಪಗಾದನು-ಒಂದು ಅಕ್ಷರ ಸಹ ನುಡಿಯಲಾರದಂತಾದನು ಅವನಿಗೆ ಅವಳ ಭಾಷಣದ ಅರ್ಥವೇ ಆಗದಾಯಿತು. ಅವನಲ್ಲಿಯ ಕಾಮಾತುರತೆಯು ಲುಪ್ತವಾಯಿತು. ಆಗ ಅವನು ಒಳ್ಳೇ ಗಂಭೀರಭಾವದಿಂದ ಅವಳ ಭಾಷಣವನ್ನು ಕೇಳಿಕೊಳ್ಳಲಿಕ್ಕೆ ಸಿದ್ಧನಾಗಿ ನಿಂತನು.

ಬಳಿಕ ಸರಸಕ್ಕನು ಪುನಃ:—"ಡಾಕ್ಟರರೇ, ನೀವೇ ನನ್ನ ಪರಾತ್ಪರ ಗುರುಗಳಾಗಿರುತ್ತೀರಿ!........" ಆಗ ಅವಳ ವಾಣಿಯು ಕುಂಠಿತವಾಯಿತು. ಅವಳು ಮುಂದೆ ಸರಿದು ಒಮ್ಮೆಲೆ ಡಾಕ್ಟರನ ಚರಣಗಳ ಮೇಲೆ ಶಿರವನ್ನು ಇಟ್ಟು ದೊಡ್ಡ ದನಿ ತೆಗೆದು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಆಗಿನ ಆ ರಂಗನಾಥರಾಯನ ಮುಖಚರ್ಯೆಯು ನೋಡತಕ್ಕಂತಹದಾಗಿತ್ತು!

ಸರಸಕ್ಕನು ಪುನಃ ಮಾತಾಡಲಾರಂಭಿಸಿದಳು:—ಡಾಕ್ಟರರೇ, ನಾನು ನಿಮ್ಮ ಶಿಷ್ಯಳಿರುತ್ತೇನೆ ನಿಮ್ಮ ವಿದ್ಯಾರ್ಥಿನಿಯಾಗಿರುತ್ತೇನೆ-ನಿಮ್ಮ ಮಗಳಾಗಿದ್ದೇನೆ-ನನ್ನನ್ನು ಕ್ಷಮಿಸಿರಿ-ನನ್ನ ಪತ್ನೀತ್ವಕ್ಕೆ ಕಲಂಕವನ್ನು ಹಚ್ಚಬೇಡಿರಿ.

ಡಾಕ್ಟರ:—ಅತಿಗೀ, ನೀವು ಅನ್ನುವದಾದರೂ ಏನು? ನನಗೆ ತಿಳಿಯಲೊಲ್ಲದು.

ಸರಸಕ್ಕ:—ಡಾಕ್ಟರರೇ, ನಿಜವಾಗಿಯೂ ನೀವು ನನ್ನ ಗುರುಗಳಾಗಿರುತ್ತೀರಿ. ಅಂತೇ ನಾನು ನಿಮ್ಮೆಡೆಯಲ್ಲಿ ಅಭಿವಚನವನ್ನು ಬೇಡಿಕೊಳ್ಳುತ್ತೇನೆ. ಅದೇನಂದರೆ—ನೀವು ನನ್ನ ಮೇಲಿನ ನಿಮ್ಮ ಕಾಮುಕ ಮನಸ್ಸನ್ನು ತೆಗೆಯಿರಿ. ಇನ್ನು ಮುಂದೆ ನನ್ನ ವಿಷಯವಾಗಿ ನಿಮ್ಮ ಮನಸ್ಸಿನಲ್ಲಿ ಪಾಪವಾಸನೆಯನ್ನು ಧರಿಸಬೇಡಿರಿ. ಇಷ್ಟೇ ನನ್ನ ಸೆರಗೊಡ್ಡಿದ ಪ್ರಾರ್ಥನೆಯು.

ಆಗ ಡಾಕ್ಟರನು ಸರಸಕ್ಕನಿಗೆ—ಅತಿಗೀ, ಏಳಿರಿ-ಏಳಿರಿ-ಹೀಗೆ ಅವಿಚಾರವನ್ನು ಮಾಡಬೇಡೇಳಿರಿ.

ಸರಸಕ್ಕ:—ಇಲ್ಲ ಡಾಕ್ಟರರೇ, ನೀವು ಮೇಲಿನಂತೆ ನನಗೆ ಅಭಿವಚನವನ್ನೀಯದ ಹೊರತು ನಾನು ನಿಮ್ಮ ಕಾಲುಗಳನ್ನು ಬಿಟ್ಟೀಳತಕ್ಕವಳಲ್ಲ.

ಇದನ್ನು ಕೇಳಿ ಡಾಕ್ಟರನು ಪೇಚಿಗೆ ಬಿದ್ದನು. ಅವಳು ಕೇಳಿದಂತೆ ಅಭಿವಚನ ಕೊಡುವದೆಂದರೆ, ಈವರೆಗೆ ಮನಸ್ಸಿನಲ್ಲಿ ಮಾಡಿದ ಮಂಡಿಗೆಯ ಲೆಕ್ಕ ಕೊಡುವವರಾರು? ಎಂದು ಅವನಿಗೆ ಅನಿಸಿದ್ದರೆ ತಪ್ಪೇನು? ಆದರಿಂದ ಡಾಕ್ಟರನ ಬಾಯಿಂದ ಆ ಅಭಿವಚನದ ವಾಕ್ಯಗಳು ಒಡನುಡಿಯದಾದವು. ಅವನು ಸುಮ್ಮನೆ ನಿಂತುಕೊಳ್ಳಲು,

ಸರಸಕ್ಕನು ಮತ್ತೆ—ಡಾಕ್ಟರರೇ, ನೀವು ನನಗೆ ಆ ಅಭಿವಚನವನ್ನು ಕೊಡಿರಿ. ನಿಮ್ಮಿಂದ ಅಭಿವಚನ ಹೊಂದದ ಹೊರತು ನಾನು ನಿಮ್ಮ ಕಾಲು ಬಿಡತಕ್ಕವಳಲ್ಲ. ನಿಮ್ಮ ಅಭಿವಚನವೇ ನನಗೆ ಅಖಂಡ ಸೌಭಾಗ್ಯದ ಕಾಣಿಕೆಯಾಗಿರುತ್ತದೆ.

ಡಾಕ್ಟರನು ಮತ್ತೆ ವಿಚಾರಾಕ್ರಾಂತನಾದನು. ಏನಾದರೂ ಆ ಪ್ರಕಾರದ ಅಭಿವಚನವನ್ನೀಯಲಿಕ್ಕೆ ಅವನು ಸಿದ್ಧನಾಗಲಿಲ್ಲ; ಆದರೆ ಆತನ ಲಕ್ಷ್ಯವು ಸರಸಕ್ಕನ ದೀನಮುಖಮುದ್ರೆಯ ಕಡೆಗೆ ಹೊರಳಲು, ಅದನ್ನು ಕಂಡು ಅವನ ಮನೋನಿಶ್ಚಯವು ಸಡಿಲಾಯಿತು. ಆತನ ಮನಸ್ಸು ಬೇಡಬೇಡೆಂದು ಸಾರಿ ಹೇಳುತ್ತಿದ್ದರೂ ಅವನು ಅವಳಿಗೆ ಬೇಕಾಗಿದ್ದ ಅಭಿವಚನವನ್ನೀಯಲಿಕ್ಕೆ ತತ್ಪರನಾದನು. ಆಗ ಆತನು ಅವಸರದಿಂದ—"ಅತಿಗೀ, ಸರಸಕ್ಕಾ, ಇಕೊಳ್ಳಿರಿ ಆ ಅಭಿವಚನವನ್ನು. ಇಂದಿ

ನಿಂದ ನಾನು ನಿಮ್ಮ ಅಭಿಲಾಷೆಯನ್ನು ಬಿಟ್ಟುಗೊಟ್ಟಿರುತ್ತೇನೆ. ನೀವು ಸುಖದಿಂದಿರ್ರಿ. ನಾನು ನಿಮ್ಮ ಬಗ್ಗೆ ಇನ್ನೆಂದೂ ಪಾಪದೂಷಿತ ವಾಸನೆಯನ್ನು ಧರಿಸುವದಿಲ್ಲ.'' ಎಂದು ನುಡಿದನು.

ಬಳಿಕ ಸರಸಕ್ಕನು ಅವನ ಕಾಲುಗಳನ್ನು ಬಿಟ್ಟು ಎದ್ದು ನಿಂತಳು. ಅವಳಿಗೆ ಆಗ ಪರಮಸಂತೋಷವೆನಿಸಿತು. ಅವಳು ಮತ್ತೊಮ್ಮೆ ಡಾಕ್ಟರನಿಗೆ ಕಟ್ಟುನಿಟ್ಟನಿಂದ—''ನೀವು ನಿಮ್ಮ ವಚನವನ್ನು ಎಂದೂ ಮುರಿಯಬೇಡಿರಿ ಕಂಡಿರಾ? ನಾನಿನ್ನು ಹೋಗುವೆನು'' ಎಂದಂದು ಅವಳು ಅಲ್ಲಿಂದ ತನ್ನ ಮನೆಗೆ ಹೊರಟಳು.

## ಎಂಟನೇ ಸರಳ ನೋಟ!

ಆಗ ಡಾಕ್ಟರನು ಅವಳನ್ನು ತಡೆದು—ಅತ್ತಿಗೀ, ನಾನು ತಮ್ಮೊಡೆಯಲ್ಲಿ ಒಂದು ವಿನಂತಿ ಮಾಡಿಕೊಳ್ಳತಕ್ಕವನಿದ್ದೇನೆ, ಎಂದು ಒಳ್ಳೇ ಗಂಭೀರವಾಣಿಯಿಂದ ನುಡಿದು ಕ್ಷಣಕಾಲ ಸುಮ್ಮನಾದನು.

ಸರಸಕ್ಕ—ಡಾಕ್ಟರ, ನೀವೇನೆನ್ನುವಿರಿ? ಒಡನುಡಿಯಿರೊಮ್ಮೆ ಬೇಗನೆ.

ಡಾಕ್ಟರ—ಅತ್ತಿಗೀ, ನಿಮಗೆ ನಾನು ಗುರುವು ಹೇಗೆ? ನೀವು ನನ್ನ ಕಾಲಿಗೇಕೆ ಬಿದ್ದಿರಿ? ನಾನು ನಿಮಗೆ ಯಾವಾಗ ಏನೆಂದು ಉಪದೇಶಿಸಿದೆನು?

ಎಂದಂದು ಡಾಕ್ಟರನು ಸರಸಕ್ಕನ ಉತ್ತರ ನಿರೀಕ್ಷಣಮಾಡಹತ್ತಿದನು. ಅತ್ತ ನರಸನಗೌಡನಾದರೂ ಡಾಕ್ಟರನ ಈ ಪ್ರಶ್ನೆಗಳಿಗೆ ತನ್ನ ಹೆಂಡತಿಯು ಯಾವ ಉತ್ತರಗಳನ್ನೀಯುವಳೋ ಎಂಬದನ್ನು ಲಾಲಿಸಿ ಕೇಳತೊಡಗಿದನು.

''ಡಾಕ್ಟರರೇ, ನಿಮ್ಮ ಪ್ರಶ್ನೆಯ ಉತ್ತರವು ವಿಶೇಷ ಕಠಿಣವಿಲ್ಲ. ನೀವು ನನ್ನನ್ನು ನಿನ್ನಿನ ದಿವಸ ಆ ವಿಷಮ ವಿವಾಹ ನಾಟಕಕ್ಕೆ ಕರೆದೊಯ್ದು ನನ್ನ ಮೇಲೆ ಅನಂತ ಉಪಕಾರ ಮಾಡಿರುತ್ತೀರಿ.''

''ಏನಂದಿರಿ? ಆ ವಿಷಮ ವಿವಾಹ ನಾಟಕಕ್ಕೆ ಕರೆದೊಯ್ದೆನೆಂದು ಅನ್ನುವಿರಲ್ಲವೆ? ಆ ನಾಟಕಕ್ಕೆ ಕರೆದೊಯ್ದು ನಿಮ್ಮ ಮನಸ್ಸಿನ ಚಂಚಲತೆಯನ್ನು ಹೆಚ್ಚಿಸಿ, ನಿಮ್ಮನ್ನು ನನ್ನ ಸಂಪೂರ್ಣ ಬಲೆಯಲ್ಲಿ ಸಿಕ್ಕಿಸುವದಕ್ಕಾಗಿಯೇ ನಾನು ಕರೆದೊಯ್ದಿದ್ದೆನು.''

“ನೀವನ್ನುವದು ಸತ್ಯವು; ಆದರೆ ನನ್ನ ಮನಸ್ಸಿನ ಮೇಲೆ ಆ ನಾಟಕದ ಪರಿಣಾಮವು ನಿಮ್ಮ ಇಚ್ಛೆಯಂತೆ ಆಗದೆ, ಅದಕ್ಕೆ ವಿಪರೀತವಾಗಿ ಆಯಿತು. ಡಾಕ್ಟರರೇ, ನಾಟಕ-ಕಾದಂಬರಿಕಾರರ ಉದ್ದೇಶವೇ ಹಾಗಿರುತ್ತದೆ. ಜನರು ಅವರ ನಾಟಕ ಕಾದಂಬರಿಗಳನ್ನು ಶೃಂಗಾರಾದಿ ರಸಗಳ ಅಭಿಲಾಷೆಯಿಂದ ನೋಡ-ಓದ-ಹತ್ತಿದರೂ, ಸದುದ್ದೇಶದಿಂದ ಬರೆಯಲ್ಪಟ್ಟ ನಾಟಕ ಕಾದಂಬರಿಗಳ ಸುಪರಿಣಾಮವು ವಾಚಕವೃಂದದ ಮೇಲೆ ಬಹುಮಟ್ಟಿಗೆ ಆಗದೆ ಇರುವದಿಲ್ಲ. ಅಂತೆಯೇ ಕಾವ್ಯಗಳಲ್ಲಿ ನಾಟಕವೇ ಸುರಮ್ಯವಾದುದೆಂದು ಮೊದಲಿನಿಂದಲೂ ಪ್ರಸಿದ್ಧವಾಗಿರುತ್ತದೆ.”

ಡಾಕ್ಟರ:—ನಾಟಕ-ಕಾದಂಬರಿಕಾರರ ಆ ಸದುದ್ದೇಶವು ನನಗೆ ಇದುವರೆಗೂ ತಿಳಿದಿರಲಿಲ್ಲವಲ್ಲ? ಅದು ಇಂದು ನಿಮ್ಮ ಮುಖಾಂತರವಾಗಿಯೇ ತಿಳಿದು ಬಂದಿತು.

ಡಾಕ್ಟರರೇ, ನಮ್ಮಂಥ ಪಾಪಿಗಳ ದುರ್ವಾಸನೆಯೇ ಅಂಥ ಬಲವತ್ತರವಾದದ್ದಿರುತ್ತದೆ. ಅಂತೇ ನಮ್ಮ ಉದ್ಧಾರಕ್ಕಾಗಿ ಜಗತ್ತಿನೊಳಗಿನ ಎಂತೆಂಥ ವಿಭೂತಿಗಳು ಯಾವ ಯಾವ ಮಾರ್ಗಗಳಿಂದ ಪ್ರಯತ್ನಿಸುತ್ತಿರುತ್ತವೆಂಬದು ನಮಗೆ ತಿಳಿಯುವದಿಲ್ಲ. ಡಾಕ್ಟರರೇ, ಪ್ರಸಿದ್ಧ ನಾಟಕ ಕಾದಂಬರಿಕಾರರ ಕಾವ್ಯಗಳಲ್ಲಿ ಒಂದು ಬಗೆಯ ಸುಸಾಮರ್ಥ್ಯವಿರುತ್ತದೆ. ಅಂತೇ ಆ ಕಾವ್ಯಗಳ ದ್ವಾರದಿಂದ ನಮ್ಮಂಥ ಪಾಪೀಜನಗಳ ಮನಸ್ಸಿನ ಮೇಲೆ ಮೊದಮೊದಲು ಒಂದು ಬಗೆಯ ಮೋಹದ ಆವರಣವು ಬೀಳುವದು. ಆ ಬಲೆಯಲ್ಲಿ ನಾವು ಸಂಪೂರ್ಣವಾಗಿ ಸಿಕ್ಕರೆ ಮಾತ್ರ ಆ ಕಾವ್ಯ-ನಾಟಕ-ಕಾದಂಬರಿಗಳು ನಮ್ಮನ್ನು ಕವಿಯ ಸದುದ್ದೇಶದ ಬಳಿಗೆ ಒಯ್ದು, ನಮ್ಮಲ್ಲಿಯ ಮೋಹ, ಲಾಲಸೆ, ಪಾಪೀಮನದಭಿಲಾಷೆ ಇತ್ಯಾದಿಗಳ ನಿವಾರಣ ಮಾಡಿ, ಪರೆ ಬಿಚ್ಚಿದ ಹಾವಿನಂತೆ ನಮ್ಮನ್ನು ಮಾಡಿಬಿಡುತ್ತವೆ; ಆದರೆ ಡಾಕ್ಟರರೇ, ಈ ಸಂಧಿಯು ಎಲ್ಲರಿಗೂ ಯಾವಾಗಲೂ ಪ್ರಾಪ್ತವಾಗುವದಿಲ್ಲ. ಎಲ್ಲ ಧಾನ್ಯಗಳು ಒಂದೇ ಹೊಲದಲ್ಲಿ ಒಮ್ಮೆಲೆ ಬೆಳೆಯುತ್ತಿದ್ದರೂ, ಅವುಗಳಲ್ಲಿಯು ಕೆಲಕೆಲವು (ಕಳ್ಳ) ಕಾಳುಗಳು ಹೇಗೆ ಎಂಥ ನಿಗಿ ನಿಗಿ ಅಗ್ನಿಯ ಎಸರಿನಲ್ಲೂ ಬೆಯ್ಯುವದಿಲ್ಲವೋ ಅದರಂತೆಯೇ ಜನಸಮುದಾಯದೊಳಗಿನ ಕೆಲ ಕೆಲವು ಪಾಪೀಜನರ ಮನಃಪ್ರವೃತ್ತಿಯು ಎಂಥ ಸುಸಂಧಿಯು ಪ್ರಾಪ್ತವಾದರೂ ಒಮ್ಮೆಲೆ ತನ್ನ ದುರ್ವಿಚಾರಗಳನ್ನು ಬಿಟ್ಟುಬಿಡ

ಲಾರದು. ಡಾಕ್ಟರರೇ, ಕವಿ-ಕಾದಂಬರಿಕಾರರೂ, ಹಡೆದ ತಾಯಿಯೂ ಒಂದೇ ವರ್ಗದವರೆಂದು ನಿರ್ವಿವಾದವಾಗಿ ಹೇಳಬಹುದು. ತಾಯಿಯು ತನ್ನ ಮಗನು ಎಂಥ ಕಿಡಿಗೇಡಿಯಾದರೂ ಅವನನ್ನು ಕೇವಲ ತುಚ್ಛೀಕರಿಸದೆ, ತನ್ನ ಅತುಲ ಮಾತೃವಾತ್ಸಲ್ಯದಿಂದ ಅವನನ್ನು ಸನ್ಮಾರ್ಗಕ್ಕೆ ತರುವದಕ್ಕೆ ಹೇಗೆ ಪ್ರಯತ್ನಿಸುತ್ತಿರುವಳೋ, ಅದರಂತೆಯೇ ಕವಿ-ಕಾದಂಬರಿಕಾರರು ತಮ್ಮ ಕೃತಿಗಳಿಂದ ಲೋಕದೊಳಗಿನ ದುರುಳರ ಮನೋವೃತ್ತಿಗಳನ್ನು ಸದ್ವರ್ತನದ ಕಡೆಗೆ ಎಳೆಯುಲಿಕ್ಕೆ ಪ್ರಯತ್ನಿಸುತ್ತಿರುತ್ತಾರೆ.

"ಅತಿಗೀ, ಸರಸಕ್ಕಾ, ನಾಟಕ ಕಾದಂಬರಿಗಳ ಕಡೆಗೆ ಈ ಪ್ರಕಾರದ ನೋಟದಿಂದ ನೋಡಲಿಕ್ಕೆ ನಿಮಗಾರು ತಿಳಿಸಿದರು?"

"ಡಾಕ್ಟರರೇ, ಅದನ್ನು ನೀವೇ ನನಗೆ ತಿಳಿಸಿದವರು. ನಿನ್ನೆ ರಂಗಭೂಮಿಯ ಮೇಲೆ ವಿಷಮ-ವಿವಾಹದೊಳಗಿನ ಆ ನವವಧುವು ಬಂದ ಕೂಡಲೆ ನನ್ನನ್ನುದ್ದೇಶಿಸಿಯೇ ಈ ನಾಟಕ ಬರೆದಿರುವರೋ ಏನೋ ಎಂದು ನನಗೆ ಆಗ ತಟ್ಟನೆ ಹೊಳೆಯಿತು."

"ಹೀಗೆಲ್ಲವೆ?"

"ಹಾಗೆಯೇ. ಯಾಕಂದರೆ ಆ ನಾಟಕ ನೋಡುವ ಕಾಲಕ್ಕೆ ನನ್ನ ಮನಸ್ಸು ಹೇಗೆ ಇಬ್ಭಾಗವಾಗಿತ್ತೋ ಹಾಗೆಯೇ ಆ ನಾಟಕದೊಳಗಿನ ಪಾತ್ರವಾದ ಆ ತರುಣಿಯು ಮನಸ್ಸೂ ದ್ವಿಭಾವದ್ದಾಗಿತ್ತು. ನನ್ನ ಮನಸ್ಸಿನ ಇತ್ತಂಡಗಳಲ್ಲಿ ಹೇಗೆ ಅವರು ಮತ್ತು ನೀವು ನಿಂತಿದ್ದಿರೋ, ಹಾಗೆಯೇ ಆ ವಿಷಮವಿವಾಹ ನಾಟಕದೊಳಗಿನ ವಧುವಿನ ಎದುರಿಗೆ ಆಕೆಯು ಆ ಜೀರ್ಣಶೀರ್ಣ ಮುದಿಗಂಡನೊತ್ತಟ್ಟಿಗೆ, ಅವಳನ್ನು ದುರ್ಮಾರ್ಗಕ್ಕೆ ಎಳೆಯುತ್ತಿದ್ದ ಅವಳ ಪ್ರಿಯನಾದ ಆ ತರುಣನೊತ್ತಟ್ಟಿಗೆ ಕಾಣುತ್ತಿದ್ದರು."

ಡಾಕ್ಟರನು ನಿರ್ಲಜ್ಜತನದಿಂದ—ಅತಿಗೀ, ಆ ಎರಡು ಪಾತ್ರಗಳಲ್ಲಿ ನಾನು ಯಾರು?

"ಡಾಕ್ಟರರೇ, ಅದನ್ನು ಮತ್ತೆ ಮತ್ತೆ ಒಡನುಡಿಯಲೇ ಬೇಕೇನು? ನೀವೇ ಆ ದುಷ್ಟ ತರುಣರು. ಸುಶಿಕ್ಷಿತರಿದ್ದು ಪರನಾರಿಯರ ಬೆನ್ನು ಹತ್ತುವ ನೀ....ರು ಮತ್ತಾರಿರುವರು? ನಿಮ್ಮಂಥವರಿಗೆ ಏನೆಂದರೂ........ ಇರುವದೇ ಇಲ್ಲ."

ಡಾಕ್ಟರನು ಮತ್ತೆ ಅಧಿಕಪ್ರಸಂಗದಿಂದ—ಅತಿಗೀ, ಸರಸಕ್ಕಾ,

ನೀವು ನಮ್ಮಂಥವರನ್ನು ಅತಿ ತುಚ್ಛರೆಂದು ತಿಳಿಯುವಿರಲ್ಲವೆ? ಅಂ!

"ಡಾಕ್ಟರರೇ, ಇನ್ನು ಸ್ಪಷ್ಟವಾಗಿ ಹೇಳುತ್ತೇನೆ. ಆ ಬಗ್ಗೆ ನನ್ನ ನ್ನು ಕ್ಷಮಿಸಿರಿ. ಡಾಕ್ಟರರೇ, ನಿಮ್ಮಂಥ ಸುಶಿಕ್ಷಿತ ಮೂರ್ಖರನ್ನು ಇದಕ್ಕೂ ಹೆಚ್ಚು ತುಚ್ಛೀಕರಿಸಲಿಕ್ಕೆ ಬೇಕು. ಬಿ. ಏ. ಎಂ. ಏ. ಇಲ್ಲವೆ ಎಂ. ಬಿ. ಬಿ. ಎಸ್. ಆಯ್. ಸಿ. ಎಸ್. ಮುಂತಾದ ದೊಡ್ಡ ದೊಡ್ಡ ಪರೀಕ್ಷೆಗಳಲ್ಲಿ ಪಾಸಾಗಿ ಯಾರು ಪರನಾರಿಯರ ವಿಷಯವಾಗಿ ದುಷ್ಟ-ಅಭಿಲಾಷೆಯನ್ನು ತಾಳುವರೋ, ಅವರಂತಹ ನೀಚರು-ತುಚ್ಛರು ಅವರೇ ಅಲ್ಲದೆ ಮತ್ತಾರಿರಬೇಕು? ಮಿಕ್ಕವರಿಗೆ ಅವರಷ್ಟು ಶಿಕ್ಷಣವಾದರೂ ದೊರೆತಿರುವದಿಲ್ಲ. ಅವರಿಂದ ಯಾವವಾದರೂ ಮರ್ಕಟಚೇಷ್ಟೆಗಳಾದರೆ ಅವರಿಗೆ ಅಶಿಕ್ಷಿತರೆಂದು ಅಷ್ಟು ದೋಷಕೊಡಲಿಕ್ಕಾದರೂ ಮಾರ್ಗವಿರುವದಿಲ್ಲ. ಆದರೆ ವಿದ್ಯಾವಂತರೂ-ಸೂಜ್ಞರೂ ಆದ ನೀವು—ನೀವಾಗಿಯೇ ಕುಳಿತು ಅಜ್ಞ ಮತ್ತು ಹಸಿಬಿಸಿಯ ನವತರುಣ ಪರನಾರಿಯರನ್ನು ಅಡ್ಡದಾರಿಗೆ ಹಚ್ಚುತ್ತಿರುವದರಿಂದ ನಿಮ್ಮ ಆ ಡಿಗ್ರಿಗಳ ಶಿಕ್ಷಣಕ್ಕೆ ಎಷ್ಟು ಕಲಂಕವುಂಟಾಗುತ್ತದೆಂಬದರ ಕಲ್ಪನೆಯಾದರೂ ನಿಮಗುಂಟೊ? ಡಾಕ್ಟರರೇ, ಲೋಕದೊಳಗಿನ ವ್ಯಭಿಚಾರವೃದ್ಧಿಗೆ-ತರುಣಿಯರ ಅಧಃಪತನಕ್ಕೆ ನಿಮ್ಮಂಥ ಕಾಮಾಂಧ-ಸುಶಿಕ್ಷಿತ-ನರಪಶುಗಳೇ ಕಾರಣರು. ನೀವು ಮಹಾ ಮಹಾ ಪಂಡಿತರೆಂದು ಜನರು ನಿಮ್ಮನ್ನು ತಮ್ಮ ದೇವರ ಮನೆಯವರೆಗೆ ಕರೆದೊಯ್ದು ಕೂರಿಸುವರು; ಆದರೆ ನೀವು ಅವರ ಭಕ್ತಿಗೊಲಿದು ಅರ್ಥಾತ್ ದ್ರೋಹಬಗೆದು, ಅವರ ತರುಣಹೆಂಡಿರ-ಹೆಣ್ಣುಮಕ್ಕಳ-ಸೊಸೆಯರ ಮೇಲೆ ಕಣ್ಣಿಡುವಿರಿ. ಡಾಕ್ಟರರೇ, ನಿಜವಾದದ್ದನ್ನು ನುಡಿಯುತ್ತಿರುವೆನು. ಸಿಟ್ಟಾಗಬೇಡಿರಿ. ಈಗಿನ ಈ ವಿಲಾಸೀಕಾಂತೆಯರ-ಸ್ತ್ರೀಸಮಾಜವನ್ನು ಭಗಿನಿಮಂಡಳದ ಅಗ್ರಗಣ್ಯರಾದ ನಿಮ್ಮಂಥವರೇ ಸೇರಿ ಅಧೋಗತಿಗಿಳಿಸಿರುತ್ತೀರಿ. ಡಾಕ್ಟರರೇ, ನಿಮ್ಮೊಳಗಿನ ಕೆಲ ಇಂಥ ಕೇವಲ ಸುಶಿಕ್ಷಿತ ಡಾಕ್ಟರ-ವಕೀಲ-ಬ್ಯಾರಿಷ್ಟರರನ್ನು ಮರಕ್ಕೆ ಕಟ್ಟಿಸಿ ಹುಣಸೀ ಬರಲಿನಿಂದ ಪಟಕಿಹೊಡಿಸಬೇಕು; ಕೊರಳಲ್ಲಿ ಕಸಬರಿಗೆ ಕಟ್ಟಿಸಿ ಕತ್ತೆಯ ಮೇಲೆ ಕೂರಿಸಿ ಮೆರಿಸಬೇಕು; ಅಂದರೂ ಅವರ ವಿಷಯದ ನನ್ನ ಸಿಟ್ಟು ಕಡಿಮೆಯಾಗಲಾರದು............

ಬರಬರುತ್ತ ಸರಸಕ್ಕನ ಮಾತುಗಳು ಸಂತಾಪಾತಿರೇಕದಿಂದ

ಹೊರ ಹೊರಡಲಾರಂಭಿಸಿದವು ಆದರೆ ಡಾಕ್ಟರನು ಅವನ್ನೆಲ್ಲ ಕೇಳಿಕೊಳ್ಳಲೇ ಬೇಕಾಗಿತ್ತು. ಅವನಿಗೆ ತನ್ನ ಎಲ್ಲ ವರ್ತನದ ಸಿನೇಮಾಚಿತ್ರಪಟವು ಕಣ್ಣೆದುರಿಗೆ ತೋರಲಾರಂಭಿಸಿತು. ಅದರಲ್ಲಿ ತಾನು ನರಸನಗೌಡನ ಮಿತ್ರತ್ವವನ್ನು ಸಂಪಾದಿಸಿ, ಅವನ ಮನೆ ಹೊಕ್ಕಂದಿನಿಂದ ನಿನ್ನೆ ಅವನ ಹೆಂಡತಿಯನ್ನು ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಮೋಟಾರಿನೊಳಗಿಂದ ತಾಜಮಹಾಲಿನ ಹಾಟೇಲ್ಲಿಗೆ ಹೋಗಿ ಕೋಲ್ಡಡ್ರಿಂಕಿನ (ಶರಬತ್ತಿನ) ಬದಲು ಮನಮುರಿ ಸೆರೆಕುಡಿಸಿ, ಮೋಟಾರಿನಲ್ಲಿಯೇ ಅವಳ ಪತ್ನೀತ್ವವನ್ನು ಭಂಗಪಡಿಸಲು ಪ್ರಯತ್ನಿಸಿದ ವರೆಗಿನ ಎಲ್ಲ ಪ್ರವೇಶಗಳು ಅವನ ಕಣ್ಣೆದುರಿಗೆ ಥಯ್ಯಾಥಯ್ಯಾ ಎಂದು ಕುಣಿಯಹತ್ತಿದವು.

ಆಗ ಸರಸಕ್ಕನು ಮತ್ತೆ—ಡಾಕ್ಟರರೇ ಈ ವರೆಗೆ ನೀವು ಏನೇನು ನೀಚ ಕಾರಸ್ಥಾನ ಮಾಡಿದಿರೆಂಬದರ ನೆನಪನ್ನು ನಿಮಗೆ ಮಾಡಿಕೊಡಲೋ?

"ಬೇಡ—ಬೇಡ—ಸರ್ವಥಾ ಬೇಡ" ಎಂದು ಡಾಕ್ಟರನು ತನ್ನ ಕಿವಿಗಳ ಮೇಲೆ ಕೈಯಿಟ್ಟು ನುಡಿದನು.

"ಹಾಗಾದರೆ ಸುಶಿಕ್ಷಿತರಿಗೆ ಹೆಸರಿಡಬೇಡಿರೆಂದೇಕೆ ಅನ್ನುತ್ತೀರಿ? ಡಾಕ್ಟರರೇ, ವಿಷಮವಿವಾಹದೊಳಗಿನ ಆ ಸುಶಿಕ್ಷಿತ ತರುಣನು ಜ್ಞಾನ-ಧನ ಸಂಪತ್ತುಗಳಿಂದ ಮತ್ತನಾಗಿದ್ದನು; ನಿಮ್ಮ-ಅವನಲ್ಲಿ ಭೇದವಾವುದೆಂಬದನ್ನು ನೀವೇ ಹೇಳಿರಿ ನೋಡೋಣ. ಇಬ್ಬರೂ ಸಮಾನಶೀಲದ ನರಪಶುಗಳು ನೀವು. ಆ ತರುಣನಿಗೆ ತಾನು ಶ್ರೀಮಂತನೂ ವಿದ್ವಾಂಸನೂ ರೂಪಲಾವಣ್ಯಗಳಿಂದ ಮಿಗಿಲಾದವನೂ ಎಂದೆನಿಸಿ, ತರುಣಿಯರು ತನಗೆ ಮರುಳಾಗಬೇಕೆಂದು ಹೇಗನಿಸುತ್ತಿತ್ತೋ, ಅದರಂತೆಯೇ ನಿಮ್ಮಂಥ ಸುಶಿಕ್ಷಿತರಿಗೂ ಅನಿಸುತ್ತಿರುತ್ತದೆ ಇಷ್ಟೇ ಅಲ್ಲ ಎಲ್ಲ ಸುಂದರಿಯರು-ನವಯುವತಿಯರು ಓಡುತ್ತ ಬಂದು ನಿಮ್ಮ ಕೊರಳಿಗೆ ತೆಕ್ಕೆ ಬೀಳಬೇಕೆಂದನಿಸುತ್ತದಲ್ಲವೆ? ಡಾಕ್ಟರರೇ, ಶಿಕ್ಷಣಖಾತೆಯೊಳಗಿನ ನಿಮ್ಮಂಥ ಕೆಲ ಸುಶಿಕ್ಷಿತ ವರಿಷ್ಠರೂ, ಆಸ್ಪತ್ರಿಯೊಳಗಿನ ಕೆಲ ನಿಷ್ಣಾತ ಡಾಕ್ಟರರೂ ತಮ್ಮ ಕೈಕೆಳಗಿನ ಪ್ರತಿಯೊಬ್ಬ ಶಿಕ್ಷಕಿಯೂ-ಚಾಕರಬಾಯಿಯೂ, ಪ್ರತಿಯೊಬ್ಬ ನರ್ಸ-ಮಿಡ್‌ವಾಯಿಫರೂ, ರೋಗಿ ಹೆಂಗಸರೂ ತಮ್ಮ ಲಗ್ನದ ಹೆಂಡರೇ ಎಂದು ತಿಳಿಯುತ್ತಿರುತ್ತಾರಂತೆ! ಇದಕ್ಕೇನೆನಬೇಕು?"

ಅದನ್ನು ಕೇಳಿ ಡಾಕ್ಟರನ ಸೊಂಡೆಯೊಣಗಿತು. ತನ್ನ ಮೋರೆಯನ್ನು ಕೂಡ ಮುಚ್ಚಿಕೊಳ್ಳಬೇಕೆಂದು ಅವನಿಗೆ ಅನಿಸಿತು. ನಿಂತಲ್ಲಿಯೇ ತನಗೆ ಮರಣವುಂಟಾಗಬೇಕೆಂದು ಆಗ ಅವನಿಗೆ ಅನಿಸಿದ್ದರೆ ಆಶ್ಚರ್ಯವೇನು?

ಸರಸಕ್ಕನು ಮತ್ತೆ—ಆ ನಾಟಕದೊಳಗಿನ ತರುಣನು ಎಷ್ಟು ಸವಿಮಾತಾಡಿ ಮನವೊಲಿಸಲೆಳಸಿದರೂ, ಆ ತರುಣಿಯು ಕಡೆಗೆ—"ನನ್ನ ಮುದುಕ ಗಂಡನೇ ನನಗಿರಲಿ"ಯೆಂದು ಯಾವಾಗ ನುಡಿದಳೋ, ಆಗಲೆ ನನ್ನ ಕಣ್ಣುಗಳು ತೆರೆದವು. ಆ ತರುಣಿಯ ಗಂಡನು ತೀರ ಮುಪ್ಪಾಗಿದ್ದನು. ಅವಳ ಲಗ್ನವನ್ನು ಲಗ್ನ ಕೂಡಿಸುವ ದಲಾಲನು—ಪುರೋಹಿತನು—ನಡುವೆ ಸಾಕಷ್ಟು ಸೆಗಣಿ ತಿಂದು ಆಕೆಯ ಕಣ್ಣು ಕಟ್ಟಿ ಆ ಮುದುಕನೊಡನೆ ಮಾಡಿದ್ದನು. ಹೀಗಿದ್ದರೂ ಅವಳು ತನ್ನ ಲಗ್ನದ ಪತಿಯನ್ನು—ದೈವದ ಇಡಿ ಗಂಟನ್ನು—ಹೇಗೆ ವಿವೇಕದಿಂದ ಹೊಂದಿದಳೋ ಹಾಗೆಯೇ ನಾನೂ ನನ್ನ ಪತಿಯನ್ನು ಬಿಟ್ಟು ಇನ್ನಾರೊಡನೆಯೂ ಮಾತು ಕೂಡ ಆಡಬಾರದೆಂದು ಆಗಿನಿಂದ ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡಿರುವೆನು. ಡಾಕ್ಟರರೇ, ನನ್ನ ಗಂಡನು ಅವಳ ಪತಿಯಷ್ಟು ಮುದುಕನಾಗಿಲ್ಲ; ನನ್ನ ಕಣ್ಣು ಕಟ್ಟಿ ಅವರೊಡನೆ ಲಗ್ನಮಾಡಿಲ್ಲ. ಲಗ್ನಕಾಲದಲ್ಲಿ ನಾನು ಅವಳಷ್ಟು ತೀರ ಚಿಕ್ಕ—ಎಂಟೇ ವರ್ಷದ ವಯಸ್ಸಿನವಳಾಗಿರಲಿಲ್ಲ ನಾನು ಆಗ ೧೪ ವರ್ಷದವಳಾಗಿದ್ದೆನು. ನನ್ನ ಭಾವೀ ಸುಖ-ದುಃಖಗಳ ಕಾಲ್ಪನಿಕ ಚಿತ್ರಗಳು ನನ್ನೆದುರಿಗೆ ಕುಣಿಯ ಹತ್ತಿದ್ದವು. ಹೀಗೆ ನಾನು ಆ ನಾಟದೊಳಗಿನ ಬಾಲೆಗಿಂತ ಎಲ್ಲ ಬಗೆಯಿಂದ ಲಗ್ನಕ್ಕೆ ಅನುರೂಪ ಸ್ಥಿತಿಯಲ್ಲಿದ್ದು, ಆ ಬಾಲೆಗೆ ಆಯತ ಸಮಯದಲ್ಲಿ ನಿಮ್ಮಂಥ ಸುಶಿಕ್ಷಿತ ತರುಣರ ಹೇಯ ಕೃತಿಯ ಬಗ್ಗೆ ಪಶ್ಚಾತ್ತಾಪವಾಗಿ ಅವಳು ತನ್ನ ಮುದಿಗಂಡನನ್ನೇ ಹೊಂದಬಯಸಿದ್ದನ್ನು ಕಂಡು ನನಗೆ ಆಗ ಬಲು ನಾಚಿಕೆಯೂ ಸ್ವಂತದ ಬಗ್ಗೆ ತ್ವೇಷವೂ ಉಂಟಾಯಿತು. ಡಾಕ್ಟರರೇ, ನೀವು ಆಗ ನನ್ನ ಹತ್ತರವೇ ಮುಖಕ್ಕೆ ಮುಖವಾಸಿಸಿಕೊಂಡು ಕುಳಿತಿದ್ದರೂ ನನ್ನೆದುರಿಗಿನ ನಿಮ್ಮ ಮೂರ್ತಿಯು ಒಮ್ಮೆಲೆ ಅದೃಶ್ಯವಾಯಿತು. ನನ್ನ ಮನೋಚಕ್ಷುಗಳ ಎದುರಿಗೆ ನನ್ನ ಪತಿಯ-ಸರಳಸ್ವಭಾವದ ಗಂಭೀರ-ಮೂರ್ತಿಯು ತೋರ ಹತ್ತಿತು. ನನ್ನ ಮೇಲೆ ಸಂಪೂರ್ಣವಾಗಿ ವಿಶ್ವಾಸವಿಟ್ಟು ತನ್ನ ಕಚೇ

ರಿಗೆ ಹೋಗಿದ್ದ ನನ್ನ ಗಂಡನ ಭವ್ಯ ಮೂರ್ತಿಯು ನನ್ನೆದುರಿಗೆ ಸ್ಥಿರವಾ ಯಿತು. ನನ್ನ ವಯಸ್ಸಾದ ಗಂಡನು ನನ್ನೆದುರಿಗೆ ಕಾಣಹತ್ತಿದನು. ಆಗ ನನಗೆ ಅಳು ಬಂದಿತು. ಆ ನನ್ನ ವಯಸ್ಸಾದ ಗಂಡನ ಬಳಿಯಲ್ಲಿ ಸಾಕಷ್ಟು ದುಡ್ಡಿದೆ; ಆದರೆ ಹೆಂಗಸರನ್ನು ಅದರಲ್ಲಿಯೂ ಪರ-ನಾರಿಯು ರನ್ನು ತನ್ನ ಬಲಿಗೆಳೆಯುವ ರೂಪ, ತಾರುಣ್ಯ, ಇಂದ್ರ-ಮಹೇಂದ್ರಜಾಲ ಗಳು ಅವನಲ್ಲೆಲ್ಲಿಂದ ಬರಬೇಕು? ಅವನಲ್ಲಿ ಆ ರೂಪಲಾವಣ್ಯಗಳಿ ಲ್ಲವೆಂದು ನಾನು ಅವನನ್ನು ಬಿಡಬೇಕೇ? ಆ ತರುಣಿಯು ತನ್ನ ಜೀವ ಚ್ಛ್ರವ ಪತಿಯನ್ನು ಕೂಡ ಬಿಡದಿರುವಾಗ, ನಾನು ನನ್ನ ನಡುಹರೆಯದ, ಆದರೆ ತುಸ ದಿನಹೋದ ಪತಿಯನ್ನು ಬಿಡಬೇಕೋ? ಇಲ್ಲ, ಇಲ್ಲ; ಡಾಕ್ಟ ರರೇ, ನನ್ನ ಮನಸ್ಸು ಎಂದೂ ಇಲ್ಲವೆಂದು ನಿನ್ನೆಯೇ ನಿಶ್ಚಯಿಸಿ ಬಿಟ್ಟಿರು ತ್ತದೆ ಇನ್ನು ನನ್ನ ಗಂಡನನ್ನಗಲಿ ನಾನೆಂದೂ ಇರಲಾರೆನು. ಆಗಿನಿಂದಲೇ ನಿಮ್ಮ ಮೂರ್ತಿಯು ನನಗೆ ವಿಷಸದೃಶವಾಗಿ ಕಾಣಹತ್ತಿತು. ಆ ತರು ಣನ ಬಗ್ಗೆ ಆ ಯುವತಿಯು ಹೇಗೆ ತಿರಸ್ಕಾರ ಪಡಹತ್ತಿದಳೋ ಹಾಗೆಯೇ ನನ್ನ ಸ್ಥಿತಿಯೂ ಆಯಿತು ನಾವು ಕುಳಿತ ಆ ಬಾಕ್ಸಿನಿಂದ ಆಗಿಂದಾಗಲೆ ನಿಮ್ಮನ್ನು ಹೊರದೂಡಿ ಬಿಡಬೇಕೆಂದು ನನಗನಿ ಸಿತು. ಆಗ ನಿಮ್ಮ ವಿಷಯದಲ್ಲಿ ನನ್ನಲ್ಲಿ ಅತಿ ತಿರಸ್ಕಾರವು ಉಂಟಾದದ್ದ ರಿಂದ ನಾನು ನಿಮ್ಮ ಕಡೆಗೆ ಹೊರಳಿ ಕೂಡ ನೋಡದೆ ಆ ನಾಟಕವನ್ನು ಏಕಾಗ್ರಚಿತ್ತದಿಂದ ನಿರೀಕ್ಷಿಸ ತೊಡಗಿದೆನು.

ಡಾಕ್ಟರ ರಂಗರಾಯನು ತೀರ ಹಣ್ಣಾದನು. ಅವನ ಬಳಿಯಲ್ಲಿ ಪಿಸ್ತೂಲಿದ್ದರೆ ಅವನು ಆಗಲೆ ಅದನ್ನು ತನ್ನ ಎದೆಯ ಮೇಲೆ ಹಾರಿಸಿ ಕೊಂಡು ಪ್ರಾಣಬಿಡುತ್ತಿದ್ದನು. ನಾಟಕ ನೋಡಲಿಕ್ಕೆ ಹೋದಾಗ ತಾನು ಸರಸಕ್ಕನ ಮೋರೆಯ ಕಡೆಗೆ ಟಕಮಕ ಒಂದೇಸವನೆ ನೋಡುತ್ತ ಕುಳಿ ತದ್ದರ ನೆನಪಾಗಲು, ಅವನಿಗೆ ಆ ಬಗ್ಗೆ ಬಹಳ ನಾಚಿಕೆಯುಂಟಾಯಿತು.

ಇತ್ತ ನರಸನಗೌಡನ ಸ್ಥಿತಿಯೂ ಬೇರೆತರದ್ದಾಗತೊಡಗಿತ್ತು. ಅವನು ಅಲ್ಲಿಗೆ ಯಾವ ಉದ್ದೇಶದಿಂದಲೇ ಬಂದಿರಲೊಲ್ಲನೇಕೆ, ಅವನ ಮೋರೆಯ ಮೇಲಿನ ಆ ಭಯಂಕರ ಶಾಂತತೆಯು ಈಗ ಅಡಗುತ್ತ ನಡೆದಿತ್ತು. ಸರ ಸಕ್ಕನ ಮೇಲಿನ ಅವನ ಸಿಟ್ಟು ಕಡಿಮೆಯಾಗಹತ್ತಿತು; ಅವಳ ಬಗ್ಗೆ ಅವ ನಲ್ಲಿ ಆದರವು ಉಂಟಾಗಲಾರಂಭಿಸಿತು.

ನಂತರ ಸರಸಕ್ಕನು ಡಾಕ್ಟರನನ್ನುದ್ದೇಶಿಸಿ—ಡಾಕ್ಟರರೇ, ನಮ್ಮ ಹೆಣ್ಣುಮಕ್ಕಳ ಜನ್ಮವು ಹಾಳಾಗದಷ್ಟು. ಲಗ್ನದ ಕಾಲಕ್ಕೆ ನಮ್ಮ ಮತಗಳ ಬಗ್ಗೆ ಯಾರೂ ನಮ್ಮನ್ನು ಕೇಳುವದಿಲ್ಲ. ನಮ್ಮ ಭಾವೀಪತಿಯು ಕುರುಡನಿರುವನೋ-ಕುಂಟನಿರುವನೋ-ಮೂಕನಿರುವನೋ- ಹೆಳವನಿರುವನೋ ಎಂಬದಿಷ್ಟನ್ನು ಕೂಡಾ ನಮಗಾರೂ ಮುಂಗಡ ತಿಳಿಸುವದಿಲ್ಲ. ತಮ್ಮ ಇಷ್ಟದಂತೆ ನಮ್ಮ ಮತಾಮತಗಳ ಪರಿವೆ ಕೂಡ ಇಡದೆ ಬೇಕಾದವರೊಡನೆ ನಮ್ಮ ಲಗ್ನವನ್ನು ನಿಶ್ಚಯಿಸಿ, ನಮ್ಮನ್ನು ಆಯತ ಸಮಯಕ್ಕೆ ಲಗ್ನಮಂಟಪದಲ್ಲಿ ನಮ್ಮ ಭಾವೀಪತಿಯ ಎದುರಿಗೆ ಒಯ್ದು ನಿಲ್ಲಿಸುತ್ತಾರೆ. ಆಗ ನಮ್ಮ ಮನಸ್ಸಿನ ಮೇಲೆ ಒಂದು ವಿಶಿಷ್ಟ ಪ್ರಕಾರದ ಆವರಣವಿರುತ್ತದೆ. ಯಾವನಿಗೆ ನಾವು ಬಾಸಿಂಗವನ್ನು ಕಟ್ಟುವೆವೋ ಅವನೊಡನೆಯೇ ನಾವು ಪ್ರೇಮದಿಂದ ನಡೆಯಬೇಕಾಗುತ್ತದೆ. ನಾವು ಆ ನಮ್ಮ ಪತಿಯೊಡನೆ ಮನಸ್ಸಿರದಿದ್ದರೂ, ಎಡವುತ್ತ-ಮುಗ್ಗುತ್ತ ಪ್ರೇಮದಿಂದ ನಡೆಯಲಿತ್ನಿಸುತ್ತಿರುವಾಗ, ನಡುವೇ ನಿಮ್ಮಂಥ ಮಹಾ ವಿದ್ವಾನ್‌ಜನರೂ, ಸುಧಾರಕರೂ, ಹಗಲುದರವಡೆಗಾರರೂ ನಮಗೆ ಗಂಟುಬೀಳುವರು. ನಮ್ಮ ಪೂರ್ವಾರ್ಜಿತ ಪುಣ್ಯಾಂಶವನ್ನೂ, ಪಾತಿವ್ರತ್ಯವನ್ನೂ ಸೆಳೆಯಲಿಕ್ಕೆ ನೀವು ಹೊಂಚುಹಾಕಿರುತ್ತೀರಿ. ಅಂಥ ಇಕ್ಕಟ್ಟಿನ ಪ್ರಸಂಗದಲ್ಲಿ ಅಬಲೆಯರಾದ ನಾವು ಏನು ಮಾಡಬೇಕೆಂಬದನ್ನು ಡಾಕ್ಟರರೇ, ನೀವೇ ಹೇಳಿರಿ ನೋಡೋಣ. ನಿಮ್ಮ ಸುಮಿಷ್ಟ ವಾಕ್ಚಾತುರ್ಯದಿಂದಲೂ, ನಯನ ಮನೋಹರ ರೂಪ-ಲಾವಣ್ಯಗಳಿಂದಲೂ ನಾವು ನಿಮ್ಮನ್ನು ಮೋಹಿಸಹತ್ತುತ್ತೇವೆ. ನಮ್ಮ ಮನಸ್ಸು ಪತಿ-ಪ್ರೇಮದಿಂದ ವಿಸ್ಖಲಿತವಾಗುತ್ತದೆ. ಆಗ ನನ್ನಂಥ ಎರಡನೇ ಹೆಂಡಂದಿರ ವಯಸ್ಸಾದರೂ ಎಷ್ಟಿರುತ್ತದೆ? ಆ ಮಾನದಿಂದ ನಾವು ತೀರ ಚಿಕ್ಕವರು. ವಿಷಯವಾಸನೆ- ಸಂಭೋಗೇಚ್ಛೆಗಳು ನಮ್ಮಲ್ಲಿ ಹೆಚ್ಚಾಗಿ ಉಂಟಾಗಿದ್ದರೂ, ಮಾನವೀಜನ್ಮದ ಇತಿಕರ್ತವ್ಯದ ಮಟ್ಟು ನಮಗೆ ಇನ್ನೂ ಗೋಚರವೇ ಆಗಿರುವದಿಲ್ಲ. ಕಾಣದೇ ಇದ್ದಂಥ ವಸ್ತುವನ್ನು ಕೈವಶಮಾಡಿಕೊಳ್ಳುವ ಹಂಬಲವಾದರೂ ಆಗ ನಮ್ಮಲ್ಲೆಲ್ಲಿಂದ ಉಂಟಾಗಬೇಕು? ಹೀಗೆ ಪ್ರಪಂಚದ-ಭವಸಾಗರದ ಕಲ್ಪನೆ ಕೂಡ ಇರದ ನಮ್ಮಲ್ಲಿ ಸೀತಾ-ಸಾವಿತ್ರಿಯರಂತಹ ಪಾತಿವ್ರತ್ಯದ ಉಚ್ಚಧ್ಯೇಯಗಳಾದರೂ ಎಲ್ಲಿಂದ ಉದ್ಭವಿಸಬೇಕು? ನಮ್ಮ ವಯಸ್ಸಿನ ಹುಡು

ಗೆಯುರಿಗೆ ತಿನಬೇಕು-ಉಣಬೇಕು-ಶೃಂಗಾರದಿಂದ ಮೆರೆಯಬೇಕು-ಮನಸ್ಸಿಗೆ ಬಂದವರೊಡನೆ ವಿಹರಿಸಬೇಕು, ಎಂಬವಿಷ್ಟೇ ಕಲ್ಪನೆಗಳು ಮೂರ್ತಸ್ವರೂಪವಾಗಿ ಕಾಣುತ್ತಿರುತ್ತವೆ. ಡಾಕ್ಟರರೇ, ವಿಷಯದ ಮೋಹವು ಅಷ್ಟಿಷ್ಟೆಂದು ಹೇಳಬರುವಂತಿಲ್ಲ. ಇದರ ಸೆಳವಿನಲ್ಲಿ ಮಹಾ ಮಹಾ ತಪಸ್ವಿಗಳೂ, ಮುನಿಗಳೂ, ಇಷ್ಟೇ ಏಕೆ ಪ್ರತ್ಯಕ್ಷ ಪರಮಾತ್ಮನೂ ಕೂಡ ಸಿಕ್ಕು, ಪೇಚಾಡಿರುತ್ತಾರೆ. ವಿಶ್ವಾಮಿತ್ರನಂತಹ ಮಹಾ ತಪಸ್ವಿಯು ಮೇನಕೆಯನ್ನು ದೃಷ್ಟಿಸಿದೊಡನೆಯೇ ಮೋಹಿಸಿ, ತನ್ನ ಸಹಸ್ರಾರು ವರ್ಷಗಳ ತಪಸ್ಸಿಗೆ ತಿಲಾಂಜಲಿಯನ್ನಿತ್ತು ಆಕೆಯೊಡನೆ ಕ್ಷಣಕಾಲವೇ ರಮಿಸಿದನು. ಮೋಹಿನೀ ರೂಪವನ್ನು ತಾಳಿದ್ದ ವಿಷ್ಣುವನ್ನು ಕಂಡು ಜಿತೇಂದ್ರಿಯನೂ, ಸಕಲ ಲೋಕಗಳ ಸ್ಥಿತಿಗತಿಗಳಿಗೆ ಕಾರಣನಾದಂಥವನೂ ಆದ ಶ್ರೀ ಶಂಕರನು ನಾಯಿಯಂತೆ ಬೆನ್ನುಹತ್ತಿದನು. ಹೀಗೆ ಮಹಾ ಮಹಾ ವಿಭೂತಿಗಳಿಂದಲೇ ಆ ವಿಷಯದ-ಮೋಹದ-ಬಲೆಯನ್ನು ಕಿತ್ತೊಗೆಯುವದಾಗದಿರುವಾಗ, ನಮ್ಮಂಥ ಅಪ್ರಬುದ್ಧ ಯುವತಿಯರ ಪಾಡೇನು? ಹೀಗೆ ಪ್ರಸಂಗವಶಾತ್ ನಮ್ಮ ಹೆಜ್ಜೆಗಳು ತಪ್ಪಿಬಿದ್ದರೆ ವಿದ್ವಾಂಸರೂ, ಸಬಲರೂ ಆದಂಥ ಗಂಡಸರು ನಮಗೇಕೆ ದೋಷಕೊಡಬೇಕು?

ಸರಸಕ್ಕನ ಈ ಪ್ರಶ್ನೆಯು ನಿಜವಾಗಿತ್ತು; ಭೇದಕವಾಗಿತ್ತು. ಅದನ್ನು ಕೇಳಿ ಡಾಕ್ಟರನಂತೆ ನರಸನಗೌಡನಿಗೂ ಬಹು ದೊಡ್ಡ ಗೂಢ ಬಿತ್ತು.

ಸರಸಕ್ಕನು ಮತ್ತೆ:—ಡಾಕ್ಟರರೇ, ಏನು ಹೇಳಲಿ ನಿಮಗೆ? ಎರಡನೇ ಸಂಬಂಧಕ್ಕೆ ತಮ್ಮ ಹೊಟ್ಟೆಯ ಹೆಣ್ಣುಮಕ್ಕಳನ್ನು ಕೊಡಬೇಕಾದರೆ ಅವರ ತಂದೆ-ತಾಯಿಗಳು ಚೆನ್ನಾಗಿ ವಿಚಾರ ಮಾಡಬೇಕು. ಲಗ್ನವಾಗತಕ್ಕವನೂ ಲಗ್ನಹೂಡುವದಕ್ಕೆ ಪೂರ್ವದಲ್ಲಿಯೇ ಚೆನ್ನಾಗಿ ವಿಚಾರ ಮಾಡಬೇಕು. ಸುಮ್ಮನೆ ಎರಡನೆಯವರ ಹುಡುಗಿ ಸಿಗುವಳೆಂದು ಅವಳನ್ನು ಗಂಟುಹಾಕಿಕೊಂಡರೆ ತೀರಿತೆಂಬ ಅವಿಚಾರವನ್ನು ಮಾಡಲಾಗದು. ಹೆಂಡತಿ ಸತ್ತವರಿಗೆ ಪುನಃ ಲಗ್ನವಾಗಬೇಡಿರೆಂದು ಅದಾರು ಹೇಳುವರು? ಆದರೆ ತಮ್ಮ ವಯಸ್ಸಿಗೆ ತಕ್ಕ, ಸ್ವಭಾವಕ್ಕನುಗುಣವಾದ ಬಾಲವಿಧವೆಯರೊಡನೆ ಅವರು ಲಗ್ನವಾದರೆ ನಮ್ಮಂಥ ನವಕುಮಾರಿಯರ ಮೇಲಿನ ಎಷ್ಟೋ ಸಂಕಟಗಳು ನೀಗಿ ಹೋದಾವು. ಮೊದಮೊದಲು ನಮ್ಮಲ್ಲಿ

ಪುನರ್ವಿವಾಹದ ರೂಢಿಯೇ ಇರದಿರುವಾಗಿನ ಮಾತು ಬೇರೆ ತರವಾಗಿತ್ತು. ಆದರೆ ಇತ್ತೀಚೆಗೆ ಅದು ಎಲ್ಲ ಕಡೆಯು ಎಲ್ಲ ಸಮಾಜಗಳಲ್ಲಿಯೂ ರೂಢವಾಗಿ ಹೋಗಿರುವದಿಲ್ಲವೇ? ಅಂದಬಳಿಕ ನಮ್ಮಂಥ ಕುಮಾರಿಯರ ಮೇಲೆ ಅವರ ಕಣ್ಣೇಕೆ? ನಾವು ಮುಗ್ಧೆಯರು, ನಮ್ಮ ತಂದೆ-ತಾಯಿಗಳು ಲೋಭಿಗಳು ಎಂದಲ್ಲವೇ ಅವರು ನಮ್ಮನ್ನು ಹೀಗೆ ಕಾಡುವದು?

ಈ ಗಂಡಸರಿಗೇನೆನಬೇಕೋ ತಿಳಿಯದಾಗಿದೆ. ಇವರಿಗೆ ವಯಸ್ಸಿಗೆ ಬಂದ-ನೆರೆತ ಹೆಣ್ಣಾದರೆ ತೀರಿತು. ಅವಳ ಗತಿಯು ಅವಳಿಗಾಗಿ ಹೋಗಲೊಲ್ಲದೇಕೆ? ತಮ್ಮ ಸುಖವನ್ನಷ್ಟು ತಾವು ನೋಡಿಕೊಳ್ಳುವರು. ಇವರಿಗೆ ಎರಡನೆಯವರ ಸುಖ-ದುಃಖಗಳ ಪರಿವೆಯೇ ಇರುವದಿಲ್ಲ. ಇವರ ಹೆಂಡಂದಿರು ಯಾವ ಮಂಗನಾಟವನ್ನೂ ಮಾಡದೆ ಸುಮ್ಮನಿದ್ದರೆ ಅದು ಆ ಹೆಂಡಂದಿರ ಸುಶೀಲ ವರ್ತನವೇ ಹೊರತು ಇವರದಲ್ಲ. ತಮ್ಮ ಹೆಂಗಸರು ದುರ್ಮಾರ್ಗವನ್ನು ಸಹಜವಾಗಿ ಹಿಡಿಯುವಂತಹ ವಿಧವಿಧದ ಸಿದ್ಧತೆಗಳು ಇವರ ನಿತ್ಯದ ಕೃತಿಯಿಂದಲೇ ಆಗುತ್ತಿರುತ್ತವೆ. ಆದರೆ ನಮ್ಮ ಹಿಂದೀಮಹಿಳೆಯರು ಮಹಾಪಾಪಭೀರುಗಳು-ಸುಶೀಲರು-ಸಹಸಾ ಅಡ್ಡ ಮಾರ್ಗಕ್ಕೆ ಬೀಳರು. ಅಂತೇ ಅವರು ಎಲ್ಲ ಮೋಹವನ್ನು ಬದಿಗೆ ಸರಿಸಿ, ತಮ್ಮ ಹೆಜ್ಜೆಗಳನ್ನು ಪವಿತ್ರ ಪಥದಲ್ಲಿಯೇ ಇಕ್ಕುತ್ತ ಸಾಗುತ್ತಿರುತ್ತಾರೆ.

ಡಾಕ್ಟರರೇ, ನಾನು ಇದುವರೆಗೆ ಮೈಮರೆತವಳಾಗಿದ್ದೆನು; ನಿಮ್ಮ ದುಃಸಂಗತಿಯಿಂದ ನನ್ನ ಹೆಜ್ಜೆಯು ಅಡ್ಡಹಾದಿಗೆ ಬೀಳುವದರಲ್ಲಿತ್ತು. ಆದರೆ ಅದು ನಿಮ್ಮಿಂದಲೇ ಬೀಳಲಿಲ್ಲ. ಡಾಕ್ಟರರೇ, ನೀವು ನನ್ನ ಶೀಲವನ್ನು ಕೆಡಿಸಲಿಕ್ಕೆ-ಪಾತಿವ್ರತ್ಯವನ್ನು ಭಂಗಪಡಿಸಲಿಕ್ಕೆ ಯತ್ನಿಸಿದಿರಿ; ಆದರೆ ನೀವೇ ನನಗೆ ಶೀಲವಂತರಲ್ಲಿಯ ಶೀಲವಂತಳಾದ ಆ ವಿಷಮ-ವಿವಾಹ ನಾಟಕದೊಳಗಿನ ಯುವತಿಯನ್ನು ತೋರಿಸಿದಿರಿ. ನೀವು ನಿನ್ನೆ ನನ್ನನ್ನು ನಾಟಕಕ್ಕೆ ಕರೆದೊಯ್ಯದಿದ್ದರೆ ನನ್ನ ಗತಿಯು ಏನಾಗುತ್ತಿತ್ತೋ ದೇವರೇ ಬಲ್ಲ. ನನಗೆ ಅಧಃಪತನದ ಹಾಗು ಸುಶೀಲದ ದಾರಿಗಳನ್ನು ನೀವೇ ತೋರಿಸಿದವರು. ಅಂತೇ ನಾನು ನಿಮ್ಮನ್ನು ಗುರುವಾಗಿ ತಿಳಿದು, ಆಗಲೆ ನಿಮ್ಮ ಕಾಲಿಗೆ ಬಿದ್ದೆನು; ಆದರೆ ಡಾಕ್ಟರರೇ-ನನ್ನ ಪರಮ ಗುರುಗಳೇ, ಯಾವು

ಏನು ಬೋಧಿಸಿದರೂ, ನಾನಿನ್ನು ನನ್ನ ಸತ್ಪಥದಿಂದ ಅಣುಮಾತ್ರವೂ ಚಲಿಸಲಾರೆನು. ನಿಮ್ಮಂಥ ದುಃಶೀಲರ ನೆರಳಿಗೆ ಕೂಡ ನಿಲ್ಲಲಾರೆನು. ಆದ್ದರಿಂದ ನನಗೀಗ ದಾರಿ ಬಿಡಿರಿ. ಇಗೋ ನಾನಿಲ್ಲಿಂದ ಹೊರಟೆನು. ಮನೆಗೆ ಹೋಗಿ ನನ್ನ ಪತಿದೇವನ ಚರಣಕ್ಕೆರಗುವೆನು; ನಡೆದ ಸಂಗತಿಯನ್ನು ಅವರಿಗೆ ವಿದಿತಪಡಿಸುವೆನು; ಬಳಿಕ ಅವರು ಮೈಹುಳಿಹೊಡೆದರೂ ಹೊಡಿಸಿಕೊಳ್ಳುತ್ತೇನೆ; ನಡಮುರಿ ಒದೆದರೂ ಒದಿಸಿಕೊಳ್ಳುತ್ತೇನೆ; ಉಪವಾಸ ವಿಟ್ಟರೂ ಇರುತ್ತೇನೆ; ಆದರೆ ನಾನಿನ್ನು ಅವರನ್ನಗಲಿರುವದಿಲ್ಲ. ಅವರೇ ನನ್ನ ತಾರಕರು; ಈ ಸ್ತ್ರೀ ದೇಹದ ಮಾಲಕರು; ಅವರೇ ನನ್ನ ಮದನರು; ಅವರೇ ನನ್ನ ಪ್ರೇಮದ ಹಕ್ಕುದಾರರು, ಎಂದಂದು ಸರಸಕ್ಕನು ಅಲ್ಲಿಂದ ವೇಗದಿಂದ ಹೊರಹೊರಟಳು.

ಆಗ ಡಾಕ್ಟರನು ಪುನಃ ಅಡ್ಡಬಂದು ವಿನಯದಿಂದ—ಇನ್ನೊಂದೇ ಪ್ರಶ್ನವಿದೆ. ಕಡೆಯದೊಂದೇ ಮಾತಿದೆ, ಎಂದು ನುಡಿಯಲು,

ಸರಸಕ್ಕನು:—ಕೇಳಿರಿ-ಕೇಳಿರಿ. ಚನ್ನಾಗಿ ಕೇಳಿಕೊಳ್ಳಿರಿ, ಎಂದು ಅಭಯಕೊಡುತ್ತ ನಿಂತುಕೊಂಡಳು.

“ನೀವು ನಿಮ್ಮ ಗಂಡನನ್ನು ಮದನನೆಂದು ತಿಳಿದು ಅವನ ಕಡೆಗೆ ಹೋದರೂ ಆ ಜರಠನಿಂದ ನಿಮಗೆ ಸುಖವೆಲ್ಲಿಂದ ಉಂಟಾಗಬೇಕು? ಈ ನಿಮ್ಮ ನಿಶ್ಚಯದಿಂದ ದಿನದಿನಕ್ಕೆ ನಿಮಗೆ ಹೆಚ್ಚು ದುಃಖವಾದೀತೇ ಹೊರತು ನಿಮ್ಮ ಶೇಷಾಯುಷ್ಯದಲ್ಲಿ ಸುಖದ ಒಂದೂ ದಿನವು ನಿಮಗೆ ಲಭಿಸಲಿಕ್ಕಿಲ್ಲ” ಎಂದು ನುಡಿದ ಡಾಕ್ಟರನ ಮಾತಿಗೆ,

ಸರಸಕ್ಕನು ನಕ್ಕು—ಇನ್ನೆಲ್ಲಿಯ ದುಃಖವು? ಇನ್ನು ಆ ದುಃಖದ ಅಶುಭ ಹೆಸರನ್ನೇ ಎತ್ತಬೇಡಿರಿ. ಸದ್ಗುಣದ-ಸುಶೀಲದ ಸುಖವೊಂದು ಲಭಿಸಿದ ಬಳಿಕ, ಆ ದುಃಶೀಲ ದುಃಖದ ಪರಿಸಮಾಪ್ತಿಯೇ ಆಯಿತೆಂದು ತಿಳಿಯಿರಿ. ಡಾಕ್ಟರರೇ, ನಾವು ನಿನ್ನಿನ ದಿವಸ ಮುಗಿಯುವವರೆಗೆ ಆ ನಾಟಕವನ್ನು ನೋಡಿದ್ದರೆ ಒಳಿತಾಗುತ್ತಿತ್ತು. ನೋಡದಿದ್ದರೂ-ಆ ವಿಷಮ ವಿವಾಹದ ಸತಿಯ ಭಾವೀ ಚರಿತ್ರವನ್ನು ನೀವು ಓದಿ ತಿಳಿದಿಲ್ಲವೇ? ಅದರಂತೆಯೇ ನನ್ನ ಆಯುಷ್ಯವಾದರೂ ಇನ್ನು ದುಃಖದ ಲವಲೇಶವೂ ಇಲ್ಲದೆ ವಿರಾಟ್ ಸುಖದಲ್ಲಿ ಲೀನವಾಗುವದು. ಡಾಕ್ಟರರೇ, ಸಹಗಮನಮಾಡುವಾಗ-ಮೃತ ಗಂಡನೊಡನೆ ಸುಟ್ಟುಕೊಂಡು ಸಾಯುವಾಗ-ಸತಿಗೆ

ಆನಂದವೇ ಆನಂದವೆನಿಸುತ್ತಿರಲು, ಆ ಜೀವಂತ ಪತಿಗಾಗಿ ಸುಶೀಲದಿಂದ ನಡೆಯುವಾಗ ದುಃಖದ ಲವಲೇಶವಾದರೂ ನಮಗೆ ಉಂಟಾದೀತೇ? ಡಾಕ್ಟರರೇ, ಚಾರುದತ್ತ-ವಸಂತಸೇನೆಯರ ಚರಿತ್ರವು ನಿಮಗೆ ಗೊತ್ತಿರುವದಷ್ಟೇ? ಶಕಾರನೆಂಬ ರಾಜಶಾಲಕನು ವೇಶ್ಯೆಯಾದ ವಸಂತಸೇನೆಯು ಚಾರುದತ್ತನನ್ನು ಬಿಟ್ಟು ತನ್ನನ್ನು ಸ್ವೀಕರಿಸಲಿಲ್ಲೆಂದು ಅವಳ ಕುತ್ತಿಗೆ ಹಿಚಿಕಿ ಕೊಲ್ಲಹೋದರೂ, ಆ ಗಣಿಕೆಯು ಬಡ ಚಾರುದತ್ತನನ್ನು ಬಿಟ್ಟು ಧನಿಕನೂ, ಸತ್ತಾಧಾರಿಯೂ ಆದ ಆತನನ್ನು ಬಯಸಿದಳೇನು? ಇನ್ನು ಚಾರುದತ್ತನು ತರುಣನಿದ್ದನಾದ್ದರಿಂದ ಅವನನ್ನು ವಸಂತಸೇನೆಯು ತ್ಯಜಿಸಲಿಲ್ಲವೆಂದು ನೀವು ಅನ್ನಬಹುದು; ಆದರೆ ಡಾಕ್ಟರರೇ, ಮಹಾನಂದೆಯು ಯಾವ ಪುರುಷನನ್ನು ಅಂಗೀಕಾರ ಮಾಡಿದ್ದಳೋ, ಆ ಪುರುಷನಂತೂ ತರುಣನಿರಲಿಲ್ಲಷ್ಟೇ? ದೃಢಕಾಯುದವನಿರಲಿಲ್ಲಷ್ಟೆ? ಆ ಮುದುಕ-ಆ ಮಹಾರೋಗಿ-ಆ ತುಂಟನಲ್ಲಿ ಆಕೆಯು ನಿರತಿಶಯ ಪ್ರೇಮಮಾಡುತ್ತಿದ್ದಳು. ವಸಂತಸೇನೆಯು ಚಾರುದತ್ತನಿಗಾಗಿ ಎಷ್ಟು ಆನಂದದಿಂದ ಮರಣಕ್ಕೀಡಾದಳೋ, ಅಷ್ಟೇ ಅಥವಾ ಅದಕ್ಕೂ ಹೆಚ್ಚು ಸಂತೋಷದಿಂದ ಮಹಾನಂದೆಯು ಆ ತನ್ನ ವೃದ್ಧ ಪತಿಗಾಗಿ ಸಾಯಲಿಲ್ಲವೇ? ಡಾಕ್ಟರರೇ, ಆನಂದವು ಸಂಪತ್ತು, ತಾರುಣ್ಯ, ಸೌಂದರ್ಯಗಳಲ್ಲಿರುವದಿಲ್ಲ. ಅದು ಸದ್ಗುಣವೆಂಬ ಸುಧಾರಸದಲ್ಲಿರುತ್ತದೆ. ಅಂತೇ ಸದ್ಗುಣಸುಧಾರಸದ ರುಚಿಯು ಒಮ್ಮೆ ಮನಸ್ಸಿನ ನಾಲಿಗೆಗೆ ಹತ್ತಿದರೆ, ಆನಂದದ ಗುರುಕೀಲವೇ ದೊರೆತಂತಾಗುವದು. ಬಳಿಕ ಮುಪ್ಪುಂಟಾದರೂ ಆನಂದವೇ, ರೋಗವುಂಟಾದರೂ ಆನಂದವೇ, ಬಡತನ ಬಂದರೂ ಆನಂದವೇ, ಸತ್ತರೂ ಆನಂದವೇ. ಹೀಗೆ ನೋಡಿದಡಲ್ಲಿ ಆನಂದವೇ ಆನಂದಮಯವಾಗುವದು. ಡಾಕ್ಟರರೇ, ಸದ್ಗುಣದ ತೇಜವು ಪ್ರತಿಯೊಂದು ಪದಾರ್ಥದ, ಪ್ರತಿಯೊಂದು ಸಂಗತಿಯ ನಿಜರೂಪವನ್ನು ಬದಲಿಸಿ ಅವಕ್ಕೆಲ್ಲ ಸ್ವಾನಂದಮಯ ರೂಪವನ್ನು ಕೊಡುತ್ತಿರುತ್ತದೆ ತದನಂತರ ನನ್ನಂತಹ ಸ್ತ್ರೀಯು ಸೀತೆಯಂತೆ ವನದಲ್ಲಿರಲಿ, ತಾರಾಮತಿಯಂತೆ ಮುಳ್ಳು-ಕಲ್ಲುಗಳಲ್ಲಿ ಸಂಚರಿಸಲಿ, ದಮಯಂತಿಯಂತೆ ಅಷ್ಟದಾರಿದ್ರ್ಯಕ್ಕೊಳಗಾಗಲಿ, ಮಹಾನಂದೆಯಂತೆ ಮಹಾರೋಗಿಯೊಡನೆ ಲಗ್ನವಾಗಲಿ, ಇಲ್ಲವೆ ವಸಂತಸೇನೆಯಂತೆ ಯಮನ ದವಡೆಯೊಳಗೆ ಸೇರಲಿ ಎಲ್ಲಿದ್ದರೂ ಅವಳಿಗೆ ಆನಂದವೇ ಆನಂದ! ಮಹಾನಂದ!!

ಸದಾನಂದ!!! ಡಾಕ್ಟರರೇ, ಆನಂದಮಯ ಪ್ರಾಣಿಯು ಮೃತ್ಯುಲೋಕದ ಮೆಟ್ಟಲುಗಳನ್ನು ಹತ್ತಿ ನಡೆದರೂ ಅವು ಅವನನ್ನು ಯಮಲೋಕಕ್ಕೆ ಒಯ್ಯದೆ, ಯಾವದೊಂದು ಆನಂದಮಯ ನಂದನವನಕ್ಕೆ ಒಯ್ದು ತಲು ಪಿಸುವವಾದುದರಿಂದ ಆ ಆನಂದದ ಮಹತಿಯನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ಎಂದು ನನ್ನ ಅಲ್ಪ ಮತಿಗೆ ತೋರುತ್ತದೆ.

"ಸರಸಕ್ಕಾ, ಅತಿಗೀ, ತಾಯಿಾ, ಈಗ ನನ್ನ ಸಂಶಯುಗಳೆಲ್ಲ ಬಯ ಲಾದವು. ನಿಮ್ಮ ಗುರುಮಂತ್ರವು ತಿಳಿಯಿತು. ಇಂದಿನಿಂದ ಪರಸ್ತ್ರೀಯ ರೆಲ್ಲರೂ ನನಗೆ ಮಾತೃಸದೃಶರು. ಇದೇ ನನ್ನ ಜೀವಿತದ ಧ್ಯೇಯವೆಂದು ನಾನಿಂದಿನಿಂದ ನಿಶ್ಚಯಮಾಡುತ್ತೇನೆ. ಆ ನನ್ನ ನಿಶ್ಚಯಕ್ಕೆ ಸರ್ವವ್ಯಾಪಿ ಯಾದಜಗಚ್ಚಾಲಕನೂ, ಪಶ್ಚಾತ್ತಾಪದಿಂದ ಪರಿಪ್ಲುತವಾದ ನಿಮ್ಮ ಪವಿತ್ರ ಚರಣಗಳೂ ಸಾಕ್ಷಿಗಳಾಗಿರಲಿ," ಎಂದು ಡಾಕ್ಟರನು ಸರಸಕ್ಕನ ಕಾಲು ಮುಟ್ಟಿ ನಮಸ್ಕಾರ ಮಾಡಿದನು.

ಸರಸಕ್ಕನು ಅವನನ್ನು ಹಿಡಿದೆತ್ತಿ ಸ್ನೇಹದಿಂದ—ಡಾಕ್ಟರರೇ, ನಿಮಗೆ ಹೇಳುವ ಅಧಿಕಾರವು ನನಗಿಲ್ಲ. ಆದರೂ ಒಂದು ಮಾತನ್ನು ಹೇಳೇಬಿಡುತ್ತೇನೆ. ಮನೆಮನೆಗೆ ಸ್ನೇಹಬೆಳಿಸಿ, ಅವರ ತರುಣ ಹೆಂಡಂದಿ ರನ್ನೂ, ಮಕ್ಕಳು-ಸೊಸೆಯಂದಿರನ್ನೂ ದುರ್ಮಾರ್ಗಕ್ಕೆಳೆಯುವ ಸಾಹಸ ಮಾಡುವದಕ್ಕಿಂತ, ತರುಣರೂ, ರೂಪ-ಲಾವಣ್ಯಯುತರೂ, ವಿದ್ವಾಂಸರೂ ಆದ ನಿಮ್ಮಂಥವರು ಸಮಾಜದೊಳಗಿನ ಸದ್ಗುಣಗಳನ್ನು ಬೆಳಿಸುವ ಪ್ರಯತ್ನ ಮಾಡಹತ್ತಿದರೆ ವಿಹಿತವಾಗಲಿಕ್ಕಿಲ್ಲವೇ?

ಅತಿಗೀ, ಇಂದಿನಿಂದ ನಾನು ಅದೇ ಕಾರ್ಯವನ್ನು ಕೈಕೊಳ್ಳುತ್ತೇನೆ.

ಡಾಕ್ಟರರೇ, ಸುಸ್ವರೂಪಕ್ಕೆ ಸದ್ಗುಣದ ಜೋಡೊಂದಾದರೆ ಬಂಗಾ ರಕ್ಕೆ ಪರಿಮಳವುಂಟಾದಂತೆಯೂ, ರತ್ನಕ್ಕೆ ಕುಂದಣಹಾಕಿದಂತೆಯೂ ಆಗು ವದು. ಗಂಡಸೇನು, ಹೆಂಗಸೇನು? ಈ ಮಾನವೀ ದೇಹವು ಎಷ್ಟು ಶುಚಿ ಯಾಗಿದ್ದೀತೋ, ಶೀಲವುಳ್ಳದ್ದಿದ್ದೀತೋ ಅಷ್ಟು ಅದಕ್ಕೆ ಹೆಚ್ಚು ಶೋಭೆ ಯುಂಟಾಗುತ್ತದೆ. ದೇವರು ಕೊಟ್ಟ ಈ ಕಾಣಿಕೆಯು-ದೇಹವು-ಎಷ್ಟು ಶುಚಿಯೂ, ನಿಷ್ಕಲಂಕವೂ ಇದ್ದಿತೋ ಅಷ್ಟು ಮನುಷ್ಯನ ಮನುಷ್ಯತ್ವಕ್ಕೆ ಕಾರಣವಾದೀತು. ಈ ಶರೀರವನ್ನು ಅಶುಚಿಗೊಳಿಸಬೇಕಾದರೆ, ಕಲಂಕ ಕ್ಕೀಡುಮಾಡಬೇಕಾದರೆ, ಶೀಲಭ್ರಷ್ಟಗೊಳಿಸಬೇಕಾದರೆ ತಡವಿಲ್ಲ.

ಆದರೆ ಹಾಗೆ ಮಾಡುವದರಿಂದ ಜಗದೀಶನ ಕೃಪೆಯ ಸಾರ್ಥಕತೆಯು ಎಳ್ಳಷ್ಟೂ ಆಗಲಾರದು. ಡಾಕ್ಟರರೇ, ಈ ದೇಹವೆಂಬ ಗಂಜೀವಸ್ತ್ರದ ಮೇಲೆ ಒಂದಿಷ್ಟು ಹೊಲಸಿನ ಕಲೆಯೂ ತಕ್ಕದ್ದಲ್ಲ. ಯಾವನೊಬ್ಬ ದೊಡ್ಡ ಮನುಷ್ಯನ ಭೆಟ್ಟಿಗೆ ಹೋಗುವಾಗ ಮೈಮೇಲೆ ಕೊಳೆಯ ವಸ್ತ್ರವಿಲ್ಲದಂತೆ ನೀವು ಹೇಗೆ ಎಚ್ಚರಪಡುವಿರೋ, ಅದರಂತೆಯೇ ದೇವರ ದರ್ಬಾರಿಗೆ ತೆರಳುವಾಗ ನಮ್ಮ ಶೀಲವು ತೊಳೆದ ಅಕ್ಕಿಯಂತೆ ಶುಭ್ರವಾಗಿಯೂ ನಿಷ್ಕಲಂಕಿತವಾಗಿಯೂ ಇರುವಂತೆ ಎಚ್ಚರಪಡತಕ್ಕದ್ದು.

"ಅಹುದು, ಅತ್ತಿಗೀ ನಾವು ಆ ಬಗ್ಗೆ ಎಚ್ಚರ ಪಡಲೇಬೇಕು."

ಡಾಕ್ಟರರೇ, ಪರಸ್ತ್ರೀಯನ್ನು ಕಡೆಗಣ್ಣಿನಿಂದ ನೋಡುವವನೇ ಗಂಡಸೆಂದು ನೀವು ಮೀಸೆಹೊತ್ತ ಗಂಡಸರು "ಗಂಡಸು" ಶಬ್ದದ ವ್ಯಾಖ್ಯೆಯನ್ನು ಮಾಡುತ್ತಿರುವಿರಿ. ಯಾವ ಗಂಡಸು ಎಷ್ಟು ಹೆಚ್ಚು ಜನ ಹೆಂಗಸರನ್ನು ಭ್ರಷ್ಟಗೊಳಿಸುವನೋ, ಅವನ ಪುರುಷತ್ವವು ಅಷ್ಟು ಶ್ರೇಷ್ಠವೆಂದು ನೀವು ತಿಳಿಯುತ್ತಿರುತ್ತೀರಿ; ಆದರೆ ಡಾಕ್ಟರರೇ, ಪರಸ್ತ್ರೀಯ ವಿಷಯವಾಗಿ ಯಾವ ಗಂಡಸು ನಪುಂಸಕನಾಗುವನೋ ಅವನೇ ನಿಜವಾದ ಪುರುಷನೆಂದು ನನ್ನ ಮತವಾಗಿರುತ್ತದೆ.

"ನಿಮ್ಮ ಅಂಬೋಣದ ಉದ್ದೇಶವು ನನಗೆ ತಿಳಿಯಲಿಲ್ಲ."

ಅದನ್ನೇ ನಾನೀಗ ವ್ಯಕ್ತಗೊಳಿಸುತ್ತೇನೆ. ಗಂಡಸೆಂದರೆ ಯಾವನಿಗೆ ಹೆಂಗಸರಿಗಿಂತ ಹೆಚ್ಚು ಪರಾಕ್ರಮ ಮಾಡಲಿಕ್ಕೆ ಬರುವದೋ ಅವನು. ಆನೆಯು ಮದವೇರಿ ಹರಿಬಿದ್ದಾಗ, ಅದರ ಮದವಿಳಿಸಿ ಅದನ್ನು ಸ್ವಾಧೀನಪಡಿಸಿಕೊಳ್ಳುವ ಕೆಲಸವು ಪುರುಷನಿಂದಾದೀತೇ ಹೊರತು ಸ್ತ್ರೀಯರಿಂದ ಎಂದಾದರೂ ಆದೀತೇ? ಸರ್ವಥಾ ಆಗಲಾರದು. ಡಾಕ್ಟರರೇ, ಮನುಷ್ಯನ ಶರೀರ-ಮನಸ್ಸುಗಳೂ, ಕೊಬ್ಬೇರಿದ ಆನೆಯೂ ಒಂದೇ ವರ್ಗದವಷ್ಟೇ? ಮಾನವನ ಮನಸ್ಸು-ಇಂದ್ರಿಯಗಳು ಚೇತನಗೊಂಡವೆಂದರೆ ಅವುಗಳನ್ನು ಸಂಯಮನಗೊಳಿಸುವದು ಮಹಾಮಹಾ ತಪಸ್ವಿಗಳಿಗೂ ಅಸಾಧ್ಯಕಾರ್ಯವಾಗುತ್ತದೆ. ಅಂಥ ಪ್ರಸಂಗದಲ್ಲಿ ಆ ಮನಸ್ಸು ಹಾಗು ಇಂದ್ರಿಯಗಳನ್ನು ಬಿಗಿದು ಹಿಡಿಯುವವನೇ ನಿಜವಾದ ಪುರುಷಶ್ರೇಷ್ಠನು; ಅಂದರೆ ಪರಸ್ತ್ರೀಯರ ವಿಷಯದಲ್ಲಿ ನಪುಂಸಕನಾಗಿರುವವನೇ ಖರೇ ಗಂಡಸು.

"ಅತಿಗಿಯವರೇ, ನನ್ನ ವರ್ತನದ ಬಗ್ಗೆ ನನಗೆ ಅತ್ಯಂತ ಲಜ್ಜೆ ಯೆನಿಸಹತ್ತಿದೆ."

ಡಾಕ್ಟರರೇ, ಮತ್ತು ನನಗಾದರೂ ನನ್ನ ನಡತೆಯ ಬಗ್ಗೆ ನಾಚಿಕೆ ಯುಂಟಾಗಿರುತ್ತದೆ. ನಾನಿನ್ನು ಮನೆಗೆ ಹೋಗಿ, ಅವರ ಚರಣಗಳನ್ನು ಹಿಡಕೊಂಡು ಕ್ಷಮೆ ಬೇಡುತ್ತೇನೆ. ಡಾಕ್ಟರರೇ, ನಾವೀರ್ವರೂ ಪರಸ್ಪರರ ದುರ್ಗುಣಗಳಿಗೆ ಉತ್ತೇಜನಕೊಟ್ಟದ್ದರಿಂದ ಉಭಯತರಿಗೂ ಈ ದುರವಸ್ಥೆಯು ಪ್ರಾಪ್ತವಾಯಿತು; ಹೀಗೆ ಮಾಡದೆ ಆಗಲೆ ಸಾವಧರಾಗಿ ಈರ್ವರೂ ಎಚ್ಚತ್ತಿದ್ದರೆ ಹೀಗೆ ಲಜ್ಜೆಯಿಂದ ತಲೆ ಕೆಳಗೆ ಹಾಕುವ ಪ್ರಸಂಗವು ಒಬ್ಬರಿಗೂ ಬರುತ್ತಿರಲಿಲ್ಲ. ಡಾಕ್ಟರರೇ, ಪಾಶ್ಚಿಮಾತ್ಯ ಜನಾಂಗದವರ ಅತಿ ಸುಧಾರಣೆಯ ದಿವಾಳಿ ಹೊರಟ ಕಾರಣವಾದರೂ ಇದೇ. ಅವರಲ್ಲಿ ಪರಪುರುಷರನ್ನು ತಮ್ಮ ಜಾಲದಲ್ಲಿ ತೊಡಕಿಸುವದಕ್ಕಾಗಿ ಮನೆಮಾರ್ತಿಯ ಹೆಂಗಸರು ಸತತ ಪ್ರಯತ್ನ ಪಡುತ್ತಿದ್ದರೆ, ಪರಸ್ತ್ರೀಯರನ್ನು ಭ್ರಷ್ಟಗೊಳಿಸುವದೇ ತಮ್ಮ ಆದ್ಯಕರ್ತವ್ಯವೆಂದು ಅಲ್ಲಿಯ ಪುರುಷವರ್ಗವು ತಿಳಿಯುತ್ತಿರುತ್ತದೆ; ಆದರೆ ಆತ್ಮಸಂಯಮನದಲ್ಲಿ ಎಂಥ ಅದ್ಭುತ ಶಕ್ತಿಯಿರುವದೆಂಬದನ್ನು ಅವರೆಲ್ಲರೂ ಮರೆತೇ ಬಿಟ್ಟಿರುವರು. ನನಗಾದರೂ ನಿನ್ನಿನವರೆಗೆ ಆ ಆತ್ಮಸಂಯಮನದ ಅನುಭವವೇ ತಿಳಿದಿರಲಿಲ್ಲ; ಆದರೆ ನಿನ್ನೆಯ ದಿನ ಆ ವಿಷಮವಿವಾಹನಾಟಕದೊಳಗಿನ ಆ ಅಬಲೆಯ ಆತ್ಮಸಂಯಮನವನ್ನು ನೋಡಿದೊಡನೆಯೇ ಅದು ನನ್ನಲ್ಲಿ ಜಾಗೃತವಾಗಿ ನೆಲೆಗೊಂಡಿತು. ಡಾಕ್ಟರರೇ, ಆ ನಾಟಕಕಾರರ ಉಪಕಾರವು ನನ್ನ ಮೇಲೆ ಅಗಣಿತವಾಗಿದೆ. ಅಂಥ ಉಜ್ವಲನಾಟಕ ಕಾದಂಬರಿಕಾರರು, ಫರಸುಗಲ್ಲು ಕಬ್ಬಿಣಕ್ಕೆ ಸೋಂಕಿದೊಡನೆಯೇ ಅದನ್ನು ಬಂಗಾರವಾಗೆ ಮಾಡುವಂತೆ, ತಮ್ಮ ಕೃತಿಗಳ ಮೂಲಕ ಪಾಪಿಗಳಾದ ನಮ್ಮಂಥವರನ್ನು ಪುನೀತಗೊಳಿಸಿ, ಸ್ವರ್ಗ ಮೃತ್ಯುಲೋಕಗಳಲ್ಲಿ ಶ್ರೇಷ್ಠರಾಗಿ ಮಾಡುತ್ತಾರೆ. ನಾವು ನಮ್ಮ ಮೈದೊಗಲಿನ ಜೋಡುಗಳನ್ನು ಮಾಡಿ ಆ ಮಹಾಕವಿಗಳ ಪಾದಗಳಿಗೆ ತೊಡಿಸಿದರೂ ಅವರ ಉಪಕಾರದಿಂದ ನಾವು ಮುಕ್ತರಾಗಲಿಕ್ಕಿಲ್ಲ. ಡಾಕ್ಟರರೇ, ಆ ನಾಟಕವನ್ನು ನೋಡಿದಾಗಿನಿಂದ ನನ್ನ ಪತಿಯು ನನಗೆ ಪರಮ ರೂಪಸಂಪನ್ನನಾಗಿ ತೋರಹತ್ತಿರುತ್ತಾನೆ. ಅದಕ್ಕೂ ಮೊದಲು ಆ ನನ್ನ ಪ್ರಾಣಕಾಂತನು ಒಬ್ಬ ಕೆಟ್ಟ ಮುಸುಡಿಯ ಕಡುವೈರಿಯಂತೆ ನನಗೆ ತೋರು

ತ್ತಿದ್ದನು; ಆದರೆ ಅದೇ ಅವನು ಈಗ ಪ್ರತಿಮದನನಂತೆ ನನಗೆ ತೋರುತ್ತ
ಲಿದ್ದಾನೆ. ಈಗ ನನ್ನ ದೃಷ್ಟಿಯು ಸೌಂದರ್ಯದಿಂದ ಪರಿಪ್ಲುತವಾದುದ
ರಿಂದ ನನಗೆ ಸೌಂದರ್ಯದ ವಿನಃ ಮತ್ತೇನೂ ಈ ಸೃಷ್ಟಿಯಲ್ಲಿ ಕಾಣ
ಲೊಲ್ಲದು. ಎತ್ತ ನೋಡಿದತ್ತ ಸೌಂದರ್ಯ! ಆನಂದ!! ಹಾಗು ಸೌಖ್ಯ!!!
ಆಹಹ! ಪ್ರತಿಯೊಬ್ಬ ಗಂಡಸಿಗೆ ತನ್ನ ಹೆಂಡತಿಯು ರತಿಯಾಗಿತೋರಹತ್ತಿ
ದರೆ ಮತ್ತು ಪ್ರತಿಯೊಬ್ಬ ಹೆಂಗಸಿಗೆ ತನ್ನ ಗಂಡನು ಕಾಮದೇವನಾಗಿ
ಕಂಡರೆ ಅವರವರಿಗಾಗುವ ಸುಖದ ಪಾಲನ್ನು ಅದಾರು ಕಸಕೊಳ್ಳಲು
ಉಳಿದಾರು?

ಡಾಕ್ಟರರೇ, ನಮ್ಮಲ್ಲಿಯ ವಿವಾಹದ ಪದ್ಧತಿಗಳನ್ನು ಸುಧಾರಿಸ
ಬೇಕು. ಗಂಡಹೆಂಡಿರ ಜೋಡನ್ನು ಶಕ್ಯವಾದಷ್ಟು ಚೆನ್ನಾಗಿ ಆರಿಸಬೇಕು.
ತರುಣಿಗೆ ಜರಠನನ್ನೂ, ವಿದ್ವಾಂಸನಿಗೆ ಹಟಮಾರಿ ಮೋಡಿ ಹೆಂಗಸನ್ನೂ
ಗಂಟುಹಾಕಬಾರದು ತರುಣನಿಗೆ ತರುಣಿಯನ್ನೂ, ವಿದ್ವಾಂಸನಿಗೆ ವಿದು
ಷಿಯನ್ನೂ ಗೊತ್ತು ಮಾಡಬೇಕು. ದುರ್ದೈವದ ಮೂಲಕ ಹಾಗೆ ಆಗೆ
ದಿದ್ದ ಪಕ್ಷಕ್ಕೆ, ಸುಖದ ಹವ್ಯಾಸಕ್ಕೆ ಬಿದ್ದು ಸದ್ಗುಣಗಳ ನಾಶವನ್ನೂ,
ದೇಹದ ಕಲಂಕವನ್ನೂ ಮಾಡಬಾರದು. ಅದರಲ್ಲಿ ಎಳ್ಳಷ್ಟೂ ಸುಖವಿಲ್ಲ.
ಸುಖದ ನಿಜವಾದ ಮಾರ್ಗವನ್ನು ಮಹಾ ಕವಿಗಳು ತೋರಿಸಿಕೊಟ್ಟಿರು
ತ್ತಾರೆ. ಅವರ ನುಡಿಯಂತೆ ನಡೆದು ಇದೇ ಜನ್ಮವನ್ನು ಕಡೆಯಾಗಿ
ಮಾಡಿಕೊಳ್ಳಬೇಕು. ಸುಮ್ಮನೆ ನಾವು ಲೋಕಮಾನ್ಯರ ಅನುಯಾಯಿಗಳು,
ಮಹಾತ್ಮರ ಅನುಯಾಯಿಗಳು; ನಾವು ಪ್ರಾಗತಿಕರು, ಸುಧಾರಕರು,
ಪುರಾಣಮತಾಭಿಮಾನಿಗಳು, ಬ್ರಾಹ್ಮಣ ಪಕ್ಷದವರು, ಬ್ರಾಹ್ಮಣೇತರ ಪಕ್ಷ
ದವರು, ಅಬ್ರಾಹ್ಮಣರು, ಹಿಂದುಗಳು, ಮುಸಲ್ಮಾನರು ಮುಂತಾದ
ಬಾಹ್ಯ ಪ್ರಭೇದಗಳಲ್ಲಿ ಮನಸ್ಸು ಹಾಕಿ ಮಾನವವೃತ್ತಿಯು ವಿನಾಶಪಡಿಸು
ವದಕ್ಕಿಂತ, ನಾವು ನಿಜವಾದ ಗಂಡಸರು, ಪುರುಷಶ್ರೇಷ್ಠರು, ಮಾನವರು,
ಲೋಕದೊಳಗಿನ ಖರೇ ಸದ್ಗುಣಿಗಳು, ಸತ್ಯಮತಾವಲಂಬಿಗಳು, ಪರ
ಧರ್ಮ ಸಹಿಷ್ಣುಗಳು ಆಗಿ ಅನಾಯಾಸವಾಗಿ ದೊರೆತಿರುವ ಈ ಮನುಷ್ಯ
ಜನ್ಮದ ಸಾರ್ಥಕತೆ ಮಾಡಿಕೊಳ್ಳತಕ್ಕದ್ದು

ಡಾಕ್ಟರರೇ, ನಶ್ವರವಾದ ಲೋಕದ ಪ್ರಾಣಿಗಳ ಅಂಗಸೌಷ್ಠವವನ್ನು
ಮನದಂದು ಅವರನ್ನು ಮೋಹಿಸಿ ಪ್ರೇಮಯುಕ್ತರಾಗುವದಕ್ಕಿಂತ ಆ

ದಯಾಘನ ಪರಮೇಶ್ವರನ ವಿಶ್ವರೂಪವನ್ನು ಮನಶ್ಚಕ್ಷುಗಳಿಂದ ಚೆನ್ನಾಗಿ ಅವಲೋಕಿಸಿ, ಅವನಲ್ಲಿ ಪ್ರೇಮ ತಾಳಿದರೆ ನಮ್ಮ ಇಹಪರಗಳು ನಮಗೆ ಅತ್ಯಂತ ಸುಖದಾಯಕಗಳಾಗಲಿಕ್ಕಿಲ್ಲವೆ? ಡಾಕ್ಟರರೇ, ತಡವಾಯಿತು, ಬೆಳಗಾಗಬಂತು; ನನ್ನ ಆ ಪ್ರಾಣಪ್ರಿಯನ ಸಹವಾಸದಲ್ಲಿ ರತಳಾಗುವದಕ್ಕೋಸ್ಕರ ನಾನಿನ್ನು ಹೊರಡುತ್ತೇನೆ, ಎಂದವಳೇ ಆ ನಮ್ಮ ಸರಕ್ಕನು ಡಾಕ್ಟರನ ಆ ದವಾಖಾನೆಯಿಂದ ತನ್ನ ಮನೆಯ ಮಾರ್ಗವನ್ನು ಹಿಡಿದಳು.

# ಉಪಸಂಹಾರ.

ಸರಸಕ್ಕನು ಶ್ರೀ ರಂಗರಾಯನ ದವಾಖಾನೆಯ ನಡುವಿನ ಪ್ರಾಕಾರದೊಳಗಿಂದ ತಲೆಬಾಗಿಲ ಕಡೆಗೆ ಹೊರಳಿ ೮-೧೦ ಹೆಜ್ಜೆ ಬರುವಷ್ಟರಲ್ಲಿ ಒಂದು ವ್ಯಕ್ತಿಯು ಅವಳನ್ನು ನಡುವೇ ಅಡ್ಡಗಟ್ಟಿ ಅವಳ ಕಾಲುಗಳನ್ನು ಗಟ್ಟಿಯಾಗಿ ಹಿಡಕೊಂಡಿತು; ಅವಳೆದುರಿಗೆ ಸಾಷ್ಟಾಂಗ ನಮಸ್ಕಾರವನ್ನು ಹಾಕಿತು. ಆಗ ಸರಸಕ್ಕನು ಬೆಚ್ಚಿಬಿದ್ದು ತುಸ ಹಿಂದಕ್ಕೆ ಸರಿಯಲು, ಆ ವ್ಯಕ್ತಿಯು ಮತ್ತೊಮ್ಮೆ ಅವಳ ಕಾಲಿಗೆರಗುತ್ತ— ಸರಸ್ವತೀ, ವಾಗ್ದೇವತೆಯಾದ ಪ್ರತ್ಯಕ್ಷ ಸರಸ್ವತೀ, ನಿನ್ನ ಪತಿಯಾದ ಈ ನರಸನಗೌಡನು ನಿನಗೆ ನಮಸ್ಕಾರ ಮಾಡುತ್ತಾನೆ, ಎಂದನು.

"ಯಾರು,—ನೀವು ಯಾರು?" ಎನ್ನುತ್ತ ರಂಗನಾಥಡಾಕ್ಟರನು ದವಾಖಾನೆಯೊಳಗಿನ ವಿದ್ಯುದ್ದೀಪಕ್ಕೆ ಈ ಮೊದಲು ಹಾಕಿದ್ದ ನೀಲೀಅರಿವೆಯ ಗವಸಣಿಗೆಯನ್ನು ಬದಿಗೆ ಸರಿಸಿ ನರಸನಗೌಡನ ಕಡೆಗೆ ದಿಟ್ಟಿಸಿ ನೋಡಿ—"ನೀವು ಇಲ್ಲಿಗೆ ಹೇಗೆ ಬಂದಿರಿ?................" ಎಂದಂದು ಮುಂದೆ ತನ್ನ ಬಾಯಿಂದ ಶಬ್ದಗಳೇ ಹೊರಡದಾಗಲು ಸುಮ್ಮನೆ ಪಿಳಿಪಿಳಿ ಕಣ್ಣುಬಿಡುತ್ತ ನಿಂತುಕೊಂಡನು.

"ಸರಸ್ವತೀ, ನಾನು ಮತ್ತಾರೂ ಇರದೆ ಅಧಮಾಧಮನಾದ ನಿನ್ನ ಗಂಡನು; ನಿನ್ನಂಥ ಸೂಜ್ಞ ಹಾಗು ತರುಣ ಯುವತಿಯನ್ನು ಮೋಸದಿಂದ ಲಗ್ನವಾದ ಈ ದಿನಹೋದ, ಗಡ್ಡ-ಮೀಸೆಗಳಿಗೆ ಕಲಪನ್ನು ತೊಡೆತೊಡೆದು

ಹರಿಯದವನಂತೆ ಕಾಣಬೇಕೆಂಬ ಬಯಕೆಯುಳ್ಳ ಎರಡನೇ ಹೆಂಡತಿಯ ಗಂಡನಾದ ನರಸನಗೌಡನು. ಪ್ರಿಯೇ, ನಿನ್ನೊಡನೆ ಲಗ್ನವಾದ ಬಗ್ಗೆ ಈಗ ನನಗೊಳ್ಳೇ ಪಶ್ಚಾತ್ತಾಪವಾಗುತ್ತಲಿದೆ.''

ತನ್ನ ಗಂಡನ ಈ ಭಾಷಣವನ್ನು ಕೇಳಿ ಸ್ವಭಾವತಃ ಕೋಮಲ ಹೃದಯದ, ಮೇಲಾಗಿ ಪಶ್ಚಾತ್ತಾಪದಿಂದ ಬಳಲಿದ್ದ ಸರಸ್ವತಿಯ ಹೃದಯವು ಕಾತರಿಸಿತು. ಅವಳ ಎರಡೂ ಕಣ್ಣುಗಳೊಳಗಿಂದ ಗಂಗಾ-ಯಮುನಾ ನದಿಗಳಂತೆ ಅಶ್ರುಪ್ರವಾಹವು ಹರಿಯುತೊಡಗಿತು. ಬಳಿಕ ಅವಳು ಗಂಡನನ್ನು ಒಡಿದೆತ್ತಿ, ಎಬ್ಬಿಸಿ ನಿಲ್ಲಿಸಿ, ಎದುರಿಗೆ ತನ್ನ ಈ ಮೊದಲಿನ ಮನೋವಲ್ಲಭ-ಉಪಪತಿಯಾದ ಡಾಕ್ಟರ ರಂಗರಾಯನು ನಿಂತಿರಲಿಕ್ಕೆ ಎಳ್ಳಷ್ಟು ಸಂಕೋಚಪಡದೆ ದೃಢವಾಗಿ ಆಲಿಂಗಿಸಿದಳು. ತನ್ನ ಮಡದಿಯ ಆ ಆಲಿಂಗನದಿಂದ ನರಸನಗೌಡನ ಮನಸ್ಸಿನ ಸಂದಿಮೂಲಿಗಳಲ್ಲಿ ಉಳಿದಿದ್ದ ದ್ವೇಷ-ಈರ್ಷೆಗಳೆಲ್ಲ ನಾಮಶೇಷವಾಗಿ ಹೊರಟು ಹೋದವು. ಆ ಕೂಡಲೆ ಅವನು ತನ್ನ ಬಗಲೊಳಗೆ ಮುಚ್ಚಿಕೊಂಡು ಬಂದಿದ್ದ ಕಿರಿಗತ್ತಿಯನ್ನು ತೆಗೆದು ಬಿಸುಟ—ಸರಸೀ,-ಪ್ರಿಯೆ ಸರಸ್ವತೀ, ಇಂದು ಇಲ್ಲಿ ಈ ಕತ್ತಿಯಿಂದ ನಿನ್ನ ಹಾಗು ನಿನ್ನ ಈ ಪ್ರಿಯಕರ ರಂಗನಾಥರಾಯನ ರುಂಡಗಳನ್ನು ಧರೆಗಿಳಿಸಿ, ನಿಮ್ಮೀರ್ವರ ಸಮ್ಮಿಶ್ರರಕ್ತವನ್ನು ಮೈಗೆಲ್ಲ ಸವರಿಕೊಂಡು ನನ್ನ ಹೃದಯ ಸಂತಾಪವನ್ನು ಶಾಂತಪಡಿಸಿ, ಬಳಿಕ ನಾನು ಪೋಲೀಸರ ಕೈಸೇರಿ ಮುಂದಿನ ಪ್ರಾಯಶ್ಚಿತ್ತಕ್ಕೆ ಅಣಿಯಾಗುತ್ತಿದ್ದೆನು; ಆದರೆ ಪ್ರಿಯೇ, ಪ್ರಾಣಕಾಂತೆ, ಈಗ ನೀನು ನಿನ್ನ ಶುದ್ಧ ಪ್ರೇಮಜಲಸಿಂಚನದಿಂದ ನನ್ನ ಹೃದಯದ ವಡವಾಗ್ನಿಯನ್ನು ನಂದಿಸಿ, ನನ್ನನ್ನು ಪರಮಾನಂದಗಿರಿಯ ಶಿಖರದ ಕೊನೆಗೆ ಒಯ್ದು ನಿಲ್ಲಿಸಿರುವದರಿಂದ ನನ್ನ ಸುಖಕ್ಕೆ ಎಣೆಯೇ ಇಲ್ಲದಂತಾಗಿದೆ. ಪ್ರಿಯೇ, ಇಂದಿನಿಂದ ನಾನು ನಿನ್ನ ದಾಸನಾಗಿರುವೆನು. ನೀನು ಎಂತು ವರ್ತಿಸಿದರೂ ನಾನು ನಿನಗೆ ಯಾವ ಬಗೆಯಿಂದಲೂ ಆತಂಕಮಾಡಲಿಕ್ಕಿಲ್ಲೆಂದು ದೇವರನ್ನು ಸ್ಮರಿಸಿ ಹೇಳುತ್ತೇನೆ.

“ಪ್ರಿಯನೇ, ನೀನು ನನ್ನ ದಾಸನೆಂತು? ನಾನೇ ನಿನ್ನ ಹೀನ-ದೀನ ದಾಸಿಯು. ನನ್ನ ಈ ಮೊದಲಿನ ಎಲ್ಲ ಅಪರಾಧಗಳನ್ನೂ ಕ್ಷಮಿಸಿ, ಜನ್ಮಜನ್ಮಾಂತರದಲ್ಲೂ ನಿನ್ನ ದಾಸಿಯಾಗಿರುವಂತೆ ಆಶೀರ್ವದಿಸು. ನಿನ್ನ ಆಶೀರ್ವಾದವೇ ದೇವರ ಕೃಪೆಯೆಂದು ನಾನು ಭಾವಿಸುತ್ತೇನೆ..........''

“ಹಾಗು ನಾನಾದರೂ ಶ್ರೇಷ್ಠ ಯೋಗ್ಯತೆಯ ಗುರುವ...” ನಿಮ್ಮ ಉಭಯತರ ಅಚ್ಛಾದಕನಾಗಿರುತ್ತೇನೆ. ನೀವು ದುರ್ಮಾರ್ಗಕ್ಕೆ ಯಲ್ಪಟ್ಟಿದ್ದ ನನ್ನ ತನು-ಮನಗಳನ್ನು ಒಳ್ಳೇ ದಾರಿಗೆ ಹಚ್ಚಿದಿರಿ. ಮನುಷ್ಯ ದೇಹವನ್ನು ಹುಟ್ಟಿಸಿದವರು ಹೇಗೆ ತಂದೆ-ತಾಯಿಗಳೋ, ಹಾಗೆಯೇ ಮಾನವನಲ್ಲಿ ಮಾನವೀ ವೃತ್ತಿಯನ್ನು ಹುಟ್ಟಿಸಿದವರಾದರೂ ತಂದೆ ತಾಯಿ ಗಳೇ. ನಿಮ್ಮ ಉಪಕಾರದ ಹೊರೆಯು ನನ್ನಿಂದ ಎಂದೂ ತೀರಿಸಲಿಕ್ಕಾಗ ದಂತಿಷ್ಟು ಗಡಚಾಗಿರುವದು. ಅಂತೇ ನೀವು ಉಭಯತರೂ ಈ ಪೋರನ ಈ ಮೊದಲಿನ ಎಲ್ಲ ಅಪರಾಧಗಳನ್ನೂ ಕ್ಷಮಿಸಿ ನನ್ನನ್ನು ತಮ್ಮ ಹೊಟ್ಟೆಯ ಮಗನೆಂದೇ ತಿಳಿಯಿರಿ.” ಎಂದು ಡಾಕ್ಟರ ಶ್ರೀರಂಗನಾಥರಾಯನು ಕಳ ವಳದಿಂದ ನುಡಿದನು.

“ರಂಗರಾಯರೇ ನೀವೊಂದು ಕೆಲಸ ಮಾಡಿದರೆ ನಮ್ಮ ಉಪಕಾರ ಗಳು ತುಸ ದಿನಗಳಲ್ಲೇ ತೀರುವವು.” ಎಂದು ಸರಸಕ್ಕನು ಮುಗುಳುನಗೆ ಯಿಂದ ನುಡಿಯಲು,

“ಅದಾವದು-ಅದಾವದು?” ಎಂದು ಡಾಕ್ಟರನು ತಡವರಿಸುತ್ತ ಪ್ರಶ್ನ ಮಾಡಿದನು.

“ಬರುವ ಮಾಘಮಾಸದಲ್ಲಿ ನೀವು ಲಗ್ನವಾದಿರೆಂದರೆ!”

ಎಂಬ ಸರಸಕ್ಕನ ನುಡಿಗೆ ಡಾಕ್ಟರನು—ಇನ್ನು ನಾನು ನಿಮ್ಮ ಮಗನೇ ಆಗಿರುವೆನು. ನೀವು ತಾಯಿ ತಂದೆಗಳು ಏನು ಮಾಡಿದ್ದಕ್ಕೂ ಈ ನಿಮ್ಮ ಮಗನು ಅದಕ್ಕೆ ಸಂಪೂರ್ಣವಾಗಿ ಸಮ್ಮತಿಸುವನು; ಎನ್ನಲು,

ಸರಸಕ್ಕ-ನರಸನಗೌಡರು ಅತ್ಯಂತ ಪ್ರೇಮದಿಂದ—ಡಾಕ್ಟರರೇ ಹಾಗಾದರೆ ನಾಳಿನ ಮಾಘದಲ್ಲಿ ನಿಮ್ಮ ಲಗ್ನವನ್ನು ಹೊಡಿಸಿ ಬಿಡೋಣ ಆ ಬಗ್ಗೆ ನೀವಿನ್ನು ಕೊಂಚವೂ ಆಲೋಚಿಸಬೇಡಿರಿ:” ಎಂದು ಹೇಳಿದರು.

—ಸಂಪೂರ್ಣ—

